

# ಸೇವಾ ಚೇತನ

## ಕೊಂಡಜ್ಜಿ ಬಸಪ್ಪ



# ಸೇವಾ ಚೇತನ

ಕೊಂಡಜ್ಜಿ ಬಸಪ್ಪನವರ
ಜನ್ಮದಿನೋತ್ಸವ ನೆನಹಿನ ಸಂಚಿಕೆ

ಸಂಪಾದಕ :

ಗೊ. ರು. ಚನ್ನಬಸಪ್ಪ



ಕೊಂಡಜ್ಜಿ ಬಸಪ್ಪ ಜನ್ಮದಿನೋತ್ಸವ ಸಮಿತಿ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ಪ್ರೊ. ಪಿ. ಶಿವಶಂಕರ್ ವೃತ್ತ, ಕೊಂಡಜ್ಜಿ ಬಸಪ್ಪ ರಸ್ತೆ
ಕೋಟೆ, ಬೆಂಗಳೂರು-560 002

*'SEVA CHETHANA'—Souvenir brought out on the occasion of installation of Bronze Bust of Late Sri Kondajji Basappa, Former State Chief Commissioner, Bharat Scouts & Guides, Karnataka, Edited by Sri Go. Ru. Chennabasappa and Published by Kondajji Basappa Birth day Celebration Committee.*

**FEBRUARY, 1990**

**Our Special thanks to—**

*All Donors and Advertisers, Wellwishers of Scout Guide Movement, members of the Birth Day Celebration Committee and*

*Sriyuths*

**D. S. Nagendrappa**
**G. R. Parameswarappa**
**Srichand K. Bathija**
**Mohankumar Kondajji**
**S. Adikeshavalu**
**B. H. Manjappa**
**B. Shantharaju**
**G. Karibasappa**
**Smt. Malini Kamath**

Printed at :

S.J.M. MUDRANA (P.) LTD.
6/3, 8th Main, Sampangiramanagar
Bangalore-560 027
Phone : 236469

# ವಂದನೆಗಳು

ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಸಾರ್ವಜನಿಕ ಜೀವನದಲ್ಲಿ ದುಡಿಯುವ ವ್ಯಕ್ತಿಗಳೇ ಅಪರೂಪವಾಗುತ್ತಿರುವ ಸ್ವಾತಂತ್ರ್ಯೋತ್ತರ ದಿನಗಳಲ್ಲಿ ನಾವು ಮರೆಯಲಾಗದ ವ್ಯಕ್ತಿ ದಿವಂಗತ ಕೊಂಡಜ್ಜಿ ಬಸಪ್ಪನವರು. ಸ್ವಾತಂತ್ರ್ಯ ಪೂರ್ವದಿಂದಲೂ ಸೇವೆಯನ್ನೇ ತಮ್ಮ ದೀಕ್ಷೆಯಾಗಿ ಕೈಗೊಂಡಿದ್ದ ಕೊಂಡಜ್ಜಿ ಅವರು ನಂತರವೂ ಅದೇ ಶ್ರದ್ಧೆಯನ್ನು ಮುಂದುವರೆಸಿಕೊಂಡು ಬಂದವರು.

ಸಜ್ಜನಿಕೆಗೆ, ಮಾನವೀಯ ಸಂಬಂಧಗಳಿಗೆ ಒಂದು ಮಧುರ ಉದಾಹರಣೆಯಾಗಿ ಬಾಳಿದ ಕೊಂಡಜ್ಜಿ ಬಸಪ್ಪನವರು ತಮ್ಮ ಜೀವಿತದಲ್ಲಿ ಗಳಿಸಿದ ದೊಡ್ಡ ಸಂಪತ್ತೆಂದರೆ ಜನಪ್ರೀತಿ. ಅವರ ಸಂಪರ್ಕಕ್ಕೆ ಬಂದ ಯಾರೂ ಅವರನ್ನು ಮರೆಯಲು ಸಾಧ್ಯವಿರಲಿಲ್ಲ. ಅಂತಹ ವಿಶಿಷ್ಟ ವ್ಯಕ್ತಿತ್ವ ಅವರದು.

ಗ್ರಾಮೀಣರ ಬದುಕಿನ ನೆಮ್ಮದಿಯ ಬಗ್ಗೆ ಅವರಿಗಿದ್ದ ಕಳಕಳಿ ಅನನ್ಯವಾದುದು. ಯುವಜನಾಂಗವನ್ನು ರಾಷ್ಟ್ರದ ಬೆಲೆಬಾಳುವ ಸಂಪತ್ತನ್ನಾಗಿಸಲು ಅವರು ವಹಿಸಿದ ಶ್ರಮ ಅನಂತವಾದುದು. ಆ ದಿಸೆಯಲ್ಲಿ ಸ್ಕೌಟ್ ಮತ್ತು ಗೈಡ್ ಚಳುವಳಿಯ ಉಸಿರಾಗಿ ದುಡಿದ ಅಮೂಲ್ಯ ಜೀವ ಕೊಂಡಜ್ಜಿ ಅವರು.

ಇದೀಗ ಅಪಾರ ಸಂಖ್ಯೆಯ ಅವರ ಅಭಿಮಾನಿಗಳ ಬಳಗ ಅವರ ಜನ್ಮ ಜಯಂತಿಯನ್ನು ಆಚರಿಸುತ್ತ ಬಂದಿದೆ. ಕಣ್ಮರೆಯಾಗಿರುವ ಭೌತಿಕ ರೂಪು ಮುಂಬರುವ ತಲೆಮಾರಿಗೂ ನೆನಪಾಗಬೇಕೆಂಬ ಆಶಯದಿಂದ ಅವರೇ ಸ್ಥಾಪಿಸಿದ ಕೊಂಡಜ್ಜಿ ಸ್ಕೌಟ್ ಶಿಬಿರಾವರಣದಲ್ಲಿ ಅವರ ಕಂಚಿನ ಪ್ರತಿಮೆಯನ್ನು ಸ್ಥಾಪಿಸಲಾಗುತ್ತಿದೆ. ಇದು ನಿಜಕ್ಕೂ ಸ್ಮರಣೀಯ ಸಂದರ್ಭ.

ಈ ಸಂದರ್ಭದ ನೆನಹಿಗಾಗಿ ಪ್ರಕಟವಾಗಿರುವ ಈ ನೆನಹಿನ ಸಂಚಿಕೆಯ ಕಾರ್ಯವನ್ನು ನಿರ್ವಹಿಸುವ ಅವಕಾಶ ನನಗೆ ಒದಗಿದುದಕ್ಕಾಗಿ ನಾನು ಹರ್ಷಿಸುತ್ತೇನೆ. ಅವರ ಬಗೆಗೆ ನನಗಿದ್ದ ಗೌರವವನ್ನು ಸೂಚಿಸಲು ಇದರಿಂದ ಸಾಧ್ಯವಾಗಿದೆ ಎಂದು ನಾನು ಭಾವಿಸಿದ್ದೇನೆ. ಅಲ್ಪಾವಧಿಯಲ್ಲಿ ಈ ಸಂಚಿಕೆ ಸಿದ್ಧಗೊಂಡಿದೆ. ಇದರಲ್ಲಿ ನಾಡಿನ ಅನೇಕ ಧರ್ಮಗುರುಗಳು, ರಾಜಕಾರಣಿಗಳು, ಸಾಮಾಜಿಕ ಸೇವಾಕರ್ತರು, ಶಿಕ್ಷಣ ತಜ್ಞರು, ಅಭಿಮಾನಿ ಆತ್ಮೀಯರು ದಿವಂಗತ ಕೊಂಡಜ್ಜಿ ಅವರ ಬಗ್ಗೆ ತೋರಿರುವ ಅಭಿಮಾನದ ನುಡಿಗಳನ್ನು ಬಳಸಿಕೊಳ್ಳಲಾಗಿದೆ. ಕೊಂಡಜ್ಜಿ ಅವರೊಂದು "ಸೇವಾ ಚೇತನ". ಅವರ ಸ್ಮರಣೆಗೆ ಈ ಸಂಚಿಕೆ ತನ್ನ ಅಳಿಲು ಕಾಣಿಕೆ ಸಲ್ಲಿಸಿದೆ.

ಈ ಸಂಚಿಕೆಯ ಕೆಲಸವನ್ನು ನನಗೆ ವಹಿಸಿದ ಕೊಂಡಜ್ಜಿ ಬಸಪ್ಪ ಜನ್ಮ ದಿನೋತ್ಸವ ಸಮಿತಿಗೆ ನಾನು ವಂದಿಸುತ್ತೇನೆ. ಸಕಾಲದಲ್ಲಿ ಮುದ್ರಿಸಿಕೊಟ್ಟ ಎಸ್.ಜೆ.ಎಂ. ಮುದ್ರಣ ಸಂಸ್ಥೆಯವರನ್ನೂ, ನೆರವಾದ ಶ್ರೀ ಕೆ. ಬಿ. ಷಣ್ಮುಖಪ್ಪ ಶ್ರೀ ಎಚ್. ಎಸ್. ಸಿದ್ಧಗಂಗಪ್ಪ ಮತ್ತು ಸೋದರಿ ಎ. ಶೋಭಾ ಅವರನ್ನೂ ನೆನೆಯುತ್ತೇನೆ. ಹಾಗೆಯೇ ಈ ಕಾರ್ಯಕ್ಕೆ ನೆರವಾದ ಎಲ್ಲಾ ಜಿಲ್ಲಾ ಸ್ಕೌಟ್ ಮತ್ತು ಗೈಡ್ ಸಂಸ್ಥೆಗಳಿಗೂ, ಜಾಹಿರಾತುದಾರರಿಗೂ ವಂದನೆಗಳು.

ಬೆಂಗಳೂರು

9-2-1990

ಸಂಪಾದಕ

# ವಿಷಯ ಸೂಚಿ


ವಂದನೆಗಳು

ಸಂದೇಶಗಳು

ಜನ್ಮದಿನೋತ್ಸವ ಸಮಿತಿ

ಸಜ್ಜನಿಕೆಯ ಸಾಕಾರಮೂರ್ತಿ 1

ದೇವಮಾನವ ಕೊಂಡಜ್ಜಿ 6

ನಾಕಂಡ ಕೊಂಡಜ್ಜಿ 9

ಧರ್ಮಗುರುಗಳ ನುಡಿ 12

Tributes 15

Kondajji as I know him 22

Dynamic, Devoted & Decent Person 24

Advertisements



ಸೇವಾನಿಷ್ಠ ಶ್ರೀ ಕೊಂಡಜ್ಜಿ ಬಸಪ್ಪ

# ಕೊಂಡಜ್ಜಿ ಬಸಪ್ಪ ಜನ್ಮದಿನೋತ್ಸವ ಸಮಿತಿ

ಅಧ್ಯಕ್ಷ

ವಿ. ಪಿ. ದೀನದಯಾಳು ನಾಯ್ಡು

ಉಪಾಧ್ಯಕ್ಷರು

ಮೇ॥ ಎಂ. ಆರ್. ನಾರಾಯಣಸಿಂಗ್
ಕೆ. ಜಿ. ಮಹೇಶ್ವರಪ್ಪ, ಎಂ. ಪಿ.
ಲೀಲಾದೇವಿ ಆರ್. ಪ್ರಸಾದ್
ಎಸ್. ಎಸ್. ಬಕ್ಕೇಶ್
ಎಂ. ಎಸ್. ಮಹದೇವಪ್ಪ
ಡಾ॥ ಎಂ. ಸಿ. ಮೋದಿ
ಎನ್. ಲಕ್ಷ್ಮಣರಾವ್
ಕೆ. ಎಂ. ನಂಜಪ್ಪ
ರೆ॥ ಡಾ. ಸಿ. ಡಿ. ಜತ್ತಣ್ಣ
ಕೆ. ಎ. ಸೋಮಣ್ಣ
ವೀರಭದ್ರಪ್ಪ ಎಂ. ಚಿಗಟೇರಿ

ಕಾರ್ಯದರ್ಶಿ

ಕೆ. ಬಿ. ಷಣ್ಮುಖಪ್ಪ

ಸದಸ್ಯರು

ಎಂ. ಗಂಗಾಧರಯ್ಯ
ಸಿ. ಆರ್. ಎಂ ಜಾಹಿರುದ್ದೀನ್
ಬಿ. ಕೆ. ಸೋಮಶೇಖರಪ್ಪ
ಮೇ॥ ಟಿ ಕೆ. ನಾಗಂಬಾಳ್
ಎಸ್. ಆದಿಕೇಶವಲು
ಡಿ. ಶ್ರೀನಿವಾಸಮೂರ್ತಿ
ಎಂ. ಕೆ. ಪಾಣಿ
ಜಿ. ಎಸ್. ವನಜಾಕ್ಷಮ್ಮ
ಜಯಪ್ರಕಾಶ್ ಜೆ. ಚಿಗಟೇರಿ
ಎಂ. ವೀರಭದ್ರಪ್ಪ, ಎಂ.ಎಲ್.ಸಿ.
ಡಿ. ಬಿ. ರಾಜು, ಎಂ.ಎಲ್.ಸಿ.
ಕೆ. ಬಿ. ಮಲ್ಲಿಕಾರ್ಜುನ್, ಎಂ.ಎಲ್.ಸಿ.
ಡಾ॥ ಸಂಗಮೇಶ್ವರ ಸರದಾರ್
ವಿಜಯಲಕ್ಷ್ಮಿ ಗುರುಸಿದ್ದಯ್ಯ
ಕೆ. ರಂಗಪ್ಪ
ಎಸ್. ಬಿ. ಸತೀಶ್‌ಕುಮಾರ್
ಡಾ॥ ಆರ್. ಲಲಿತ
ಶೀಲಾ ಇರಾನಿ
ಡಾ॥ ಕೆ. ಜಿ. ಗುರುಮೂರ್ತಿ
ಎಂ. ಆರ್. ಸಂಪತ್‌ಕುಮಾರನ್
ಬಿ. ಶಾಂತರಾಜ್
ಡಾ॥ ಮುನಿಯಪ್ಪ
ಐ. ಎ. ಕೈರನ್ನ
ಮೇ॥ ಎ. ಚಿ. ಸೇತುನಾರಾಯಣ್
ಹೆಚ್. ವೈ. ರಾಮಯ್ಯ
ಕೆ. ಎಸ್. ಶಂಕರ್
ಜೀವರತ್ನ ಬಿಸನೀರ್
ಎಂ. ಎ. ಖಾಲಿದ್
ಎಸ್. ಗುರುರಾಜರಾವ್
ಎಂ. ಎಂ. ಲೋಂಡೆ
ಎಸ್. ಜೆ. ಶಿವಕುಮಾರ್
ಡಾ॥ ಬಿ. ಎಂ ಆಲೂರ್
ಸಿ. ಎಸ್. ಪಾಟೀಲ್
ಮೋಹನ್‌ಕುಮಾರ್ ಕೊಂಡಜ್ಜಿ
ಡಾ॥ ಎಸ್. ಬಿ. ವಂಸತ್‌ಕುಮಾರ್
ಡಾ॥ ಕೆ. ಬಿ. ಗುರುಮೂರ್ತಿ

ಪಿ. ವಿಶ್ವನಾಥ್
ಎಂ. ಎ. ಚೆಲ್ಲಯ್ಯ
ಆಂದನೂರು ಶೋಭಾ
ಗೊ. ರು. ಚನ್ನಬಸಪ್ಪ
ಸುಜಯ ಪ್ರಕಾಶ್
ಶ್ರೀಚಂದ್ ಕೆ. ಬತೀಜಾ
ಲೆ|| ಕ|| ವಿ. ಜಿ. ಹೆಚ್. ಕಾತ್ಕರ್
ಕೆ. ಪಿ. ಮಹದೇವಪ್ಪ
ಡಾ|| ಸಿದ್ದಾರೆಡ್ಡಿ
ಕೆ. ಬಿ. ರಾಜಶೇಖರ್
ಕೆ. ಬಿ. ವಿಜಯಕುಮಾರ್
ಬಿ. ಬಸವಯ್ಯ
ಜಿ. ಆರ್. ಪರಮೇಶ್ವರಪ್ಪ
ಡಾ|| ಎಸ್. ಜಿ. ಚಂದ್ರ
ಎಸ್. ಉದಯಶಂಕರ್
ಶಾರದ ಮಂದಣ್ಣ
ವಸಂತಿಬಾಯಿ ಜಿಗಜಣಗಿ
ಎ. ಡಿ. ಚಂದ್ರಶೇಖರ್
ವಿಲಿಯಂ ಡಿಸೌಜ
ಗಣಪತಿ ಪೈ
ಲಲಿತ ಕೃಷ್ಣಸ್ವಾಮಿ
ಜಿ. ಶಿವಪ್ಪ
ಎ. ಶಿವಮಹದೇವನ್
ಗೀತಾ ನಟರಾಜ್

ಹೇಮ ವಿಜಯಕುಮಾರ್
ಶಾರದ ಸೀತಪ್ಪ
ಪ್ರಭುದೇವ ಜೆ. ಚಿಗಟೇರಿ
ಹೆಚ್. ರಾಮಪ್ಪ
ಬಿ. ಆರ್. ವಿ. ಗೌಡ್
ಟಿ. ಎನ್. ವೀರಪ್ಪ
ಕೆ. ಜಿ. ಷಣ್ಮುಖಪ್ಪ
ಬಿ. ಎಂ. ಸಿದ್ದಯ್ಯ
ಕೆ. ಜಿ. ಜಯದೇವಪ್ಪ
ಟಿ. ಶ್ರೀನಿವಾಸನ್
ಬಿ. ಸಿದ್ದಲಿಂಗಪ್ಪ
ಎಚ್. ಎಸ್. ಸಿದ್ಧಗಂಗಪ್ಪ
ಜೆ. ಸಂಗಪ್ಪ
ಎನ್. ಜೆ. ರಾಜಶೇಖರಪ್ಪ
ಜೆ. ಎಚ್. ಗುರುಬಸಪ್ಪ
ಆರ್. ಚೈತನ್ಯಕುಮಾರ್
ವೈ. ಬಿ. ಮಲ್ಲಿಕಾರ್ಜುನಪ್ಪ
ಎನ್. ಜೆ. ಗುರುಸಿದ್ದಯ್ಯ
ನಾಗರಾಜ್ ಶ್ಯಾಮನೂರ್
ಪಿ. ಜ್ಯೋತಿರ್‌ಲಿಂಗನಗೌಡ
ಟಿ. ಎಸ್. ಬಸವರಾಜ್
ಎಂ. ಮಲ್ಲಿಕಾರ್ಜುನಯ್ಯ
ಎಲ್. ರಾಜಪ್ಪ
ಡಿ. ಎಸ್. ನಾಗೇಂದ್ರಪ್ಪ

ಎಂ. ಶಿವಯ್ಯ
ಎಂ. ಬಸವರಾಜಪ್ಪ
ಶ್ರೀಮತಿ ಮಾಲಿನಿ ಪ್ರಭಾಕರ್
ಕೆ. ಬಿ. ಲಿಂಗರಾಜ್
ಜಿ. ಕರಿಬಸಪ್ಪ
ಪೂಜಾರಿ ಸಿದ್ಧಬಸಪ್ಪ
ಕೆ. ಬಿ. ರವೀಂದ್ರನಾಥ್
ಬಿ. ಹನುಮಂತಪ್ಪ
ಕೆ. ಜಿ. ಚಿತ್ರಶೇಖರಪ್ಪ
ಬಿ. ಹೆಚ್. ಮಂಜಪ್ಪ
ಬಿ. ವೀರಪ್ಪ
ಬಿ. ಆರ್. ವೇಣು ಗೋಪಾಲಕೃಷ್ಣ
ಎ. ಪಿ. ನಾಗೇಶರಾವ್
ಬಿ. ಎಸ್. ಭದ್ರಪ್ಪ
ರತ್ನಾಕರ್ ಡಿ. ವನಕುದ್ರೆ
ಸಿ. ಎಸ್. ನರಸಿಂಹಮೂರ್ತಿ
ಗಿರಿಜಮ್ಮ ರುದ್ರಯ್ಯ
ಜಿ. ಟಿ. ಪುಟ್ಟಸ್ವಾಮಿ
ಕೆ. ಜಿ. ಶಂಕರಪ್ಪ
ಟಿ. ಎಸ್. ಲೂಕಾಸ್
ಕೆ. ದಾನಪ್ಪ
ಬಿ. ಬಸವಂತಪ್ಪ
ಎನ್. ಎಂ. ಪಾಟೀಲ್
ಕೆ. ಹನುಮಂತಪ್ಪ

---

## ಭಾರತ್ ಸ್ಕೌಟ್ ಮತ್ತು ಗೈಡ್ಸ್, ಕರ್ನಾಟಕ

### ಕೇಂದ್ರ ಕಾರ್ಯಾಲಯದ ಆಡಳಿತ ಮಂಡಳಿ

**ವಿ. ಪಿ. ದೀನದಯಾಳು ನಾಯ್ಡು**
ರಾಜ್ಯ ಮುಖ್ಯ ಆಯುಕ್ತರು

ರೈಟ್.ರೆ.ಡ್. ಸಿ. ಡಿ. ಜತ್ತಣ್ಣ
ಲೀಲಾದೇವಿ ಆರ್. ಪ್ರಸಾದ್
ರಾಜ್ಯ ಆಯುಕ್ತರುಗಳು

ರವಿವೆಸ್ಲಿ
ರಾಜ್ಯ ಜಂಟಿ ಕಾರ್ಯದರ್ಶಿ

ಎ. ಪಿ. ನಾಗೇಶರಾವ್
ರಾಜ್ಯ ಕಾರ್ಯದರ್ಶಿ

ಹೆಚ್. ವೈ. ರಾಮಯ್ಯ
ರಾಜ್ಯ ಖಜಾಂಚಿ

**ಎಂ. ವೀರಪ್ಪ ಮೊಯಿಲಿ**
ಕಾನೂನು, ಸಂಸದೀಯ ವ್ಯವಹಾರಗಳು, ಯೋಜನೆ ಮತ್ತು ವಾರ್ತಾ,
ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಮಂತ್ರಿಗಳು

ವಿಧಾನ ಸೌಧ
ಬೆಂಗಳೂರು-560 001
ದಿನಾಂಕ : 31-1-1990

ಚಿತ್ರದುರ್ಗ ಜಿಲ್ಲೆ ಹರಿಹರ ತಾಲ್ಲೂಕು ಕೊಂಡಜ್ಜಿಯಲ್ಲಿ ದಿ|| ಶ್ರೀ ಕೊಂಡಜ್ಜಿ ಬಸಪ್ಪನವರ ಪ್ರತಿಮೆ ಅನಾವರಣದ ಸಂದರ್ಭದಲ್ಲಿ ಸ್ಮರಣ ಸಂಚಿಕೆ ಹೊರ ತರುತ್ತಿರುವುದು ಶ್ಲಾಘನೀಯ. ದಿ|| ಶ್ರೀ ಕೊಂಡಜ್ಜಿ ಬಸಪ್ಪನವರು ರೈತ ಕುಟುಂಬದಲ್ಲಿ ಜನಿಸಿ, ರಾಷ್ಟ್ರದ ಮತ್ತು ರಾಜ್ಯದ ಅನೇಕ ಉನ್ನತ ಹುದ್ದೆಗಳಲ್ಲಿ ಐದು ದಶಕಕ್ಕೂ ಹೆಚ್ಚು ಕಾಲ ಸೇವೆ ಸಲ್ಲಿಸಿರುತ್ತಾರೆ. ಅಲ್ಲದೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿ ಮೂಲಕ ಯುವಕರಲ್ಲಿ ಶಿಸ್ತು, ರಾಷ್ಟ್ರ ಪ್ರೇಮ ಜಾಗ್ರತಗೊಳಿಸಲು ಪ್ರಯತ್ನಿಸಿದರು.

ದಿ|| ಶ್ರೀ ಕೊಂಡಜ್ಜಿ ಬಸಪ್ಪನವರ ಪ್ರತಿಮೆ ಅನಾವರಣಗೊಳಿಸುತ್ತಿರುವುದು ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಸಂದ ಗೌರವ. ದಿವಂಗತರು ಹಾಕಿರುವ ಮಾರ್ಗದರ್ಶನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿ ಮುಂದುವರಿಯಲೆಂದು ಆಶಿಸುತ್ತೇನೆ.

---

**ಪುಟ್ಟಸ್ವಾಮಿ ಗೌಡ**
ಲೋಕೋಪಯೋಗಿ ಮತ್ತು
ನೀರಾವರಿ ಖಾತೆ ಮಂತ್ರಿಗಳು

ವಿಧಾನ ಸೌಧ
ಬೆಂಗಳೂರು-560 001
ದಿನಾಂಕ : 30-1-1990

ದಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್, ಕರ್ನಾಟಕ ಶಾಖೆಯು ದಿ|| ಶ್ರೀ ಕೊಂಡಜ್ಜಿ ಬಸಪ್ಪನವರ 74ನೇ ಹುಟ್ಟುಹಬ್ಬ ಆಚರಿಸುತ್ತಿರುವ ಸಂದರ್ಭದಲ್ಲಿ ಶ್ರೀಯುತರ ಕಂಚಿನ ಪ್ರತಿಮೆಯನ್ನು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ, ಕೊಂಡಜ್ಜಿಯಲ್ಲಿ ಸ್ಥಾಪಿಸಲು ಉದ್ದೇಶಿಸಿರುವುದು ಚರಿತ್ರಾರ್ಹ ವಿಷಯವಾಗಿದೆ. 'ಸ್ಮರಣ ಸಂಚಿಕೆ' ಬಿಡುಗಡೆ ಹರ್ಷದಾಯಕವಾಗಿದೆ. ಸಮಾರಂಭವು ಅತ್ಯಂತ ಯಶಸ್ವಿಯಾಗಿ ನೆರವೇರಲೆಂದು ಹಾರೈಸುತ್ತೇನೆ.

D. VEERENDRA HEGGADE

Dharmasthala-574 216

*Date : 11-9-1989*

Received your letter and I am glad to note that you will celebrate the 74th Birthday of Sri Kondajji Basappa in a grand manner. It is befitting that you have planned several constructive projects on this happy occasion. I pray Shree Manjunatha Swamy to bless all your projects with great success.

May Shree Manjunatha Swamy blese you.

Thanking you.

---

**ಶ್ರೀಮತಿ ಮನೋರಮ ಮಧ್ವರಾಜ್**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಮತ್ತು ಸಹಕಾರ ಮಂತ್ರಿಗಳು

ವಿಧಾನ ಸೌಧ
ಬೆಂಗಳೂರು-560 001

ದಿನಾಂಕ : 5-2-1990

ದಿವಂಗತ ಶ್ರೀ ಕೊಂಡಜ್ಜಿ ಬಸಪ್ಪ ಅವರ 74ನೇ ಜನ್ಮದಿನೋತ್ಸವವನ್ನು ಆಚರಿಸುವ ಸಂದರ್ಭದಲ್ಲಿ ಅವರ ಕಂಚಿನ ಪ್ರತಿಮೆಯನ್ನು ಸ್ಥಾಪಿಸುತ್ತಿರುವುದು ಸಂತೋಷದ ವಿಚಾರ.

ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಚಳುವಳಿಯಲ್ಲಿ ದಿವಂಗತರ ಪಾತ್ರ ಚಿರ ಸ್ಮರಣೀಯ. ಕರ್ನಾಟಕ ಹಾಗೂ ಭಾರತ ಸರ್ಕಾರಗಳ ಮಂತ್ರಿಮಂಡಲದ ಸಚಿವರಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ಅವರು ಸಲ್ಲಿಸಿರುವ ಸೇವೆ ಬಹುಕಾಲ ಜನಮನದಲ್ಲಿ ಅಚ್ಚಳಿಯದೆ ನಿಲ್ಲುವಂತಹದು.

ಕೊಂಡಜ್ಜಿ ಬಸಪ್ಪ ಅವರ ಅವಿರತ ದುಡಿಮೆ ನಮ್ಮ ಯುವಕ-ಯುವತಿಯರಿಗೆ ದಾರಿದೀಪವಾಗಲಿ ಎಂದು ಮನಸಾರೆ ಹಾರೈಸುತ್ತೇನೆ.

ವಂದನೆಗಳು.

## ಕೊಂಡಜ್ಜಿ ಬಸಪ್ಪನವರ ಕಂಚಿನ ಪ್ರತಿಮೆ ಅನಾವರಣ, 9-2-1990

### ಆಹ್ವಾನಿತರು



ಶ್ರೀ ಎಸ್. ನಿಜಲಿಂಗಪ್ಪ



ಶ್ರೀ ವೀರೇಂದ್ರ ಪಾಟೀಲ



ಶ್ರೀ ಕೆ. ಎಚ್. ರಂಗನಾಥ್



ಶ್ರೀ ಎಂ. ವೀರಪ್ಪ ಮೊಯಿಲಿ

# ಸಜ್ಜನಿಕೆಯ ಸಾಕಾರಮೂರ್ತಿ ಶ್ರೀ ಕೊಂಡಜ್ಜಿ ಬಸಪ್ಪ

ಎಚ್. ಎಸ್. ಸಿದ್ಧಗಂಗಪ್ಪ

ಬುಡ ಮೆಟ್ಟಿ ತುದಿ ಮುಟ್ಟಿ ಎದೆ ತಟ್ಟಿದವರುಂಟು
ಬುಡವಲುಗಿ ತುದಿಯೊಣಗಿ ಕುಸಿದು ಬಿದ್ದವರುಂಟು
ಆದರೆ.

ಮರದ ತುದಿ ಎಷ್ಟಿದೆಯೋ ಅಷ್ಟೇ ಎತ್ತರ ಬೆಳೆದು
ನೆಲದ ಮೇಲೆಯೆ ನಿಂತು ತುದಿ ಮುಟ್ಟಿದಿರಿ ನೀವು!
ನಿಮ್ಮ ರೀತಿಯೆ ಬೇರೆ.

ಗೆದ್ದ ಹಿಗ್ಗಿಲ್ಲ, ಸೋತ ಸಂಕಟವಿಲ್ಲ!

ಅಹುದು
ನಿಮ್ಮ ಮುಖ ಅಮಾಯಕ, ಮಾತು ಸೌಜನ್ಯಪೂರ್ಣ,
ಸ್ನೇಹಕ್ಕೆ ಹೇಳಿ ಮಾಡಿದ ಜೀವ ಅನ್ಯೋನ್ಯಭಾವ;
ಉಂಡ ಕಹಿ ಸಿಹಿಗಿಂತಲೂ ಹೆಚ್ಚು ಅದೇ ನಿಮ್ಮ ಗೆಲುವಿನ
ಗುಟ್ಟು!

ಇದು ಸರಳತೆ ಸಜ್ಜನಿಕೆಯ ಸಾಕಾರ ಮೂರ್ತಿ ದಕ್ಷ–ಸ್ವಚ್ಛ ಆಡಳಿತಗಾರ–ನಿಸ್ವಾರ್ಥ ಸಾಮಾಜಿಕರ್ತ ಶ್ರೀ ಕೊಂಡಜ್ಜಿ ಬಸಪ್ಪನವರ ವ್ಯಕ್ತಿತ್ವವನ್ನು ನಾಡಿನ ಹಿರಿಯ ಜಾನಪದ ವಿದ್ವಾಂಸರಾದ ಶ್ರೀ ಗೊ. ರು. ಚನ್ನಬಸಪ್ಪನವರು ತಮ್ಮ ಕವನದಲ್ಲಿ ಬಣ್ಣಿಸಿದ ರೀತಿ:

1915ರ ಡಿಸೆಂಬರ್ 11ರಂದು ಕೊಂಡಜ್ಜಿ ಎಂಬ ಗ್ರಾಮದಲ್ಲಿ ಮಧ್ಯಮ ವರ್ಗದ ರೈತ ಕುಟುಂಬದಲ್ಲಿ ಜನನ. ತಂದೆ ನಿಂಗಪ್ಪ, ತಾಯಿ ಹಾಲಮ್ಮ. ಅಪ್ಪ ಅಮ್ಮ ಪ್ರೀತಿಯಿಂದ ಇಟ್ಟ ಹೆಸರು ಬಸಪ್ಪ. ಮೂರು ಜನ ಸಹೋದರರು ಒಬ್ಬ ತಂಗಿಯ ಜೊತೆಯಲ್ಲಿ ಬೆಳೆದ ಬಾಲಕ ಬಸಪ್ಪ ಮುಂದೆ ಹುಟ್ಟಿದ ಊರಿನ ಕೀರ್ತಿಯನ್ನು, ರಾಷ್ಟ್ರ ಅಂತರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ಯುತ್ತಾನೆಂದು ಯಾರೂ ಎಣಿಸಿರಲಿಲ್ಲ! ಎಲ್ಲ ದೈವ ಲೀಲೆ!

ವಿದ್ಯಾಭ್ಯಾಸ

ಬಸಪ್ಪನವರ ಪ್ರಾಥಮಿಕ ಶಿಕ್ಷಣ ಕೊಂಡಜ್ಜಿಯಲ್ಲಿ ನಡೆಯಿತು. ಇಂಗ್ಲಿಷ್ ಲೋಯರ್ ಸೆಕಂಡರಿ ಶಿಕ್ಷಣವನ್ನು ಮಲೆಬೆನ್ನೂರಿನಲ್ಲಿ ಮುಗಿಸಿದರು. ಮುಂದೆ ಓದಲು ಮನೆಯ ಆರ್ಥಿಕ ಪರಿಸ್ಥಿತಿ ಅಡ್ಡಬಂದಿತು. ಇಂತಹ ಪರಿಸ್ಥಿತಿಯಲ್ಲಿ ಈಚಗಟ್ಟದ ಬಸಪ್ಪ, ಹುನುಮನಹಳ್ಳಿಯ ಪಟೇಲ್ ಮಹದೇವಪ್ಪ ಮುಂದೆ ಬಂದು ಶಿಕ್ಷಣವನ್ನು ಮುಂದುವರಿಸಲು ನೆರವಾದರು. 1934ರಲ್ಲಿ ದಾವಣಗೆರೆಯ ಸರ್ಕಾರಿ ಪ್ರೌಢಶಾಲೆಯಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಜಯಗಳಿಸಿ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಸುದ್ದಿ ಮಾಡಿದರು. ಎಲ್ಲರ ಪ್ರೀತಿ ವಿಶ್ವಾಸಗಳಿಸಿದರು. ಬಸಪ್ಪನವರಿಗೆ ಮುಂದೆ ಓದಬೇಕೆಂಬ ಉತ್ಕಟವಾದ ಬಯಕೆ. ಆದರೆ ಏನು ಮಾಡುವುದು, ಹದಗೆಟ್ಟ ಆರ್ಥಿಕ ಪರಿಸ್ಥಿತಿಯಿಂದ ಕಂಗೆಟ್ಟರು. ಓದಿಗೆ ತಿಲಾಂಜಲಿಯನಿಟ್ಟು ಗುಮಾಸ್ತರಾಗುವ ಬಯಕೆಯನ್ನು ವ್ಯಕ್ತಪಡಿಸಿದರು. ಹೆತ್ತವರ ಪುಣ್ಯ, ಬಸಪ್ಪನವರ ಸಜ್ಜನಿಕೆ, ಪ್ರಾಮಾಣಿಕತೆ, ಗುರುಹಿರಿಯರಲ್ಲಿ ಭಕ್ತಿ ದಾರಿ ತೋರಿಸಿತು, ದೈವ ಡಾ|| ಮಹಂತಯ್ಯರವರ ರೂಪದಲ್ಲಿ ಸಹಾಯ ಮಾಡಲು ಮುಂದೆ ಬಂದಿತು. ಕಾಲೇಜು ಮೆಟ್ಟಲತ್ತುವ ಸುಯೋಗ ಅವರದಾಯಿತು.

ಆಗಿನ ಅವರ ವೇಷ ಭೂಷಣ ತುಂಬಾ ಸರಳ. ಬಿಳಿ ಪಂಚೆ, ಷರಟು, ಕೋಟು, ತಲೆಗೆ ಟೋಪಿ. ಸಹಪಾಠಿಗಳಂತೆ ಒಳ್ಳೆಯ ಬಟ್ಟೆ ಹಾಕಬೇಕೆಂಬ ಆಸೆ ಇದ್ದರೂ ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಳ್ಳುವ ಗುಣವನ್ನು ರೂಢಿಸಿಕೊಂಡಿದ್ದರು. ಹಾಸಿಗೆ ಇದ್ದಷ್ಟು ಕಾಲು ಚಾಚಬೇಕೆನ್ನುವ ಗಾದೆ ಅವರನ್ನು ಸದಾ ಎಚ್ಚರವಾಗಿರುವಂತೆ

ಮಾಡಿತ್ತು. ಆಗ ಇಡೀ ರಾಜ್ಯದಲ್ಲಿ ಇದ್ದುದೇ ಎರಡು ಕಾಲೇಜುಗಳು. ಒಂದು ಮೈಸೂರಿನಲ್ಲಿ, ಮತ್ತೊಂದು ಬೆಂಗಳೂರಿನಲ್ಲಿ. ಕೊಂಡಜ್ಜಿಯವರು ಬೆಂಗಳೂರಿನಲ್ಲಿ ಇಂಟರ್‌ಮೀಡಿಯಟ್ ಕಾಲೇಜು ಸೇರಿದರು. ತೋಟದಪ್ಪ ಛತ್ರ ಅವರಿಗೆ ಆಶ್ರಯ ನೀಡಿತು. 1938ರಲ್ಲಿ ಸೆಂಟ್ರಲ್ ಕಾಲೇಜಿನಿಂದ ಬಿ.ಎಸ್ಸಿ. ಪದವಿ ಪಡೆದರು. ಅವರು ಶಾಲೆಯಲ್ಲಿ ಕಲಿತಿದ್ದಕ್ಕಿಂತ ಹೊರಗೆ ಅನುಭವದಿಂದ ಕಲಿತದ್ದೆ ಹೆಚ್ಚು. ಅನುಭವ ಅವರೊಬ್ಬ ಪರಿಪೂರ್ಣ ವ್ಯಕ್ತಿಯನ್ನಾಗಿ ರೂಪಿಸಿತು.

1938ರಲ್ಲಿ ಕೊಂಡಜ್ಜಿಯವರ ಜೀವನದಲ್ಲಿ ಎರಡು ಮಹತ್ವಪೂರ್ಣವಾದ ಘಟನೆ ನಡೆಯಿತು. ಒಂದು ವಿಶ್ವವಿದ್ಯಾನಿಲಯದಿಂದ ಪದವಿ, ಮತ್ತೊಂದು ಜೀವನ ಸಂಗಾತಿಯನ್ನು ಕೈಹಿಡಿಯುವ ಭಾಗ್ಯ. ಅವರನ್ನು ಕೈಹಿಡಿದ ಮಹಾಸಾಧ್ವಿ ಕಂದಗಲ್ ಗ್ರಾಮದ ಸರ್ವ ಮಂಗಳಮ್ಮ. ವಿವಾಹ ಬಂಧನದಿಂದ ವ್ಯಾಸಂಗಕ್ಕೆ ಜಡ ಚಣೆಯಾಗುತ್ತದೆ ಎಂದು ಹೇಳುವುದುಂಟು. ಆದರೆ ಬಸಪ್ಪನವರ ಜೀವನದಲ್ಲಿ ಹಾಗೆ ಆಗಲಿಲ್ಲ. ಮಾವ ಪಟೇಲ್ ಚನ್ನಬಸಪ್ಪನವರ ಸಹಾಯ, ಪ್ರೋತ್ಸಾಹದಿಂದ 1940ರಲ್ಲಿ ಪೂನಾದ ಲಾ ಕಾಲೇಜಿನಲ್ಲಿ ಎಲ್.ಎಲ್.ಬಿ. ಪದವಿ. ನಂತರ ಒಂದು ವರ್ಷ ವಕೀಲ ಎಚ್. ಲಿಂಗಪ್ಪನವರ ಬಳಿ ಶಿಷ್ಯ ವೃತ್ತಿ. ಗುರುವಿನಿಂದ ಕಲಿತ ಉತ್ತಮ ಪಾಠ ಎಂದರೆ ಸಮಯ ಪರಿಪಾಲನೆ. ಇದು ಅವರ ಜೀವನವನ್ನು ರೂಪಿಸಿಕೊಳ್ಳಲು ಸಹಕಾರಿಯಾಯಿತು

## ರಾಜಕೀಯ ಕ್ಷೇತ್ರ

1942ರಲ್ಲಿ ದಾವಣಗೆರೆಯಲ್ಲಿ ಸ್ವತಂತ್ರವಾಗಿ ವಕೀಲ ವೃತ್ತಿಯನ್ನು ಪ್ರಾರಂಭಿಸಿದರು. ಎರಡು ವರ್ಷ ನಡೆಯಿತು. ಅಷ್ಟರಲ್ಲಿ ಅವರಲ್ಲಿ ಮನೆಮಾಡಿಕೊಂಡಿದ್ದ ಸರಳತೆ, ಸಜ್ಜನಿಕೆ, ಸಹೃದಯತೆ, ಕಾಯಕ ನಿಷ್ಠೆಯಿಂದ ಜನ ಆಕರ್ಷಿತರಾದರು. ಜನರ ಒತ್ತಾಯ ಒತ್ತಾಸೆಯಿಂದ ರಾಜಕೀಯ ಕ್ಷೇತ್ರಕ್ಕೆ ಕಾಲಿಟ್ಟರು. 1944ರಲ್ಲಿ ಚಿತ್ರದುರ್ಗ ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿ ಆಯ್ಕೆಯಾದರು. 28ನೇ ವಯಸ್ಸಿಗೆ ಗುರುತರವಾದ ಜವಾಬ್ದಾರಿ! ಇದು ಅವರ ವ್ಯಕ್ತಿತ್ವಕ್ಕೆ ಸಂದ ಗೌರವ. ಯಾವುದೇ ಸ್ಥಾನಮಾನ ಸೇವೆಗೊಂದು ಅವಕಾಶ ಎನ್ನುವ ಮನೋಭಾವವನ್ನು ರೂಢಿಸಿಕೊಂಡ ಕೊಂಡಜ್ಜಿಯವರು ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗಾಗಿ ಹಗಲಿರುಳು ಶ್ರಮಿಸಿದರು. ಅವರಲ್ಲಿದ್ದ ಸಾಮಾಜಿಕ ಕಳಕಳಿಯ ಫಲವಾಗಿ ಪ್ರತಿ ತಾಲ್ಲೂಕಿನಲ್ಲಿ ಪ್ರೌಢಶಾಲೆ, ಆಸ್ಪತ್ರೆಗಳು, ಚಿತ್ರದುರ್ಗ, ದಾವಣಗೆರೆಯಲ್ಲಿ ಕಾಲೇಜುಗಳು ಸ್ಥಾಪನೆಗೊಂಡವು. ಆಗಿನ ಚಿತ್ರದುರ್ಗ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಎ. ಸಿ. ನಿರ್ವಾಣೇಗೌಡರು ಹಾಗೂ ಶ್ರೀ ಡಿ. ಎಚ್. ಚಂದ್ರಶೇಖರಯ್ಯ ಅವರು ನೀಡಿದ ನೆರವನ್ನು ಸದಾ ಸ್ಮರಿಸಿಕೊಳ್ಳುತ್ತಿದ್ದರು.

ಕೊಂಡಜ್ಜಿ ಬಸಪ್ಪನವರ ದೃಷ್ಟಿಯಲ್ಲಿ ಸೋಲು ಗೆಲುವು ಒಂದೇ ನಾಣ್ಯದ ಎರಡು ಮುಖಗಳು. ಒಂದಕ್ಕೊಂದು ಪೂರಕ. ಗೆದ್ದಾಗ ಹಿಗ್ಗಿ ಮೈಮರೆಯದೆ ಸೋತಾಗ ಕುಗ್ಗಿ ತಲೆ ತಗ್ಗಿಸದೆ, ಎರಡನ್ನೂ ಸಮಾನ ಚಿತ್ತದಿಂದ ನೋಡಿದ ತತ್ವಜ್ಞಾನಿ. 1947ರಲ್ಲಿ ದಾವಣಗೆರೆ ತಾಲ್ಲೂಕಿನಿಂದ ಚಿತ್ರದುರ್ಗ ಜಿಲ್ಲಾ ಬೋರ್ಡಿಗೆ ಅವಿರೋಧವಾಗಿ ಆಯ್ಕೆ. ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿ ಸೋಲು. ಕ್ರಿಯಾಶೀಲರಾದ ಬಸಪ್ಪನವರು ಇದರಿಂದ ವಿಚಲಿತರಾಗಲಿಲ್ಲ. ಮತ್ತೆ ವಕೀಲ ವೃತ್ತಿ ಪ್ರಾರಂಭಿಸಿದರು. ಕಕ್ಷಿದಾರರಿರಲಿ, ಪ್ರತಿಕಕ್ಷಿದಾರರಿರಲಿ ಗೌರವದಿಂದ, ಪ್ರೀತಿ ವಿಶ್ವಾಸದಿಂದ ಕಾಣುತ್ತಿದ್ದರು.

## ವಿವಿಧ ಸಂಘ ಸಂಸ್ಥೆಗಳಲ್ಲಿ

ಕಾಯಕ ನಿಷ್ಠೆ, ನಿಸ್ವಾರ್ಥ ಸೇವಾ ಮನೋಭಾವ ಹೃದಯ ಶ್ರೀಮಂತಿಕೆ, ವಿಶಾಲದೃಷ್ಟಿಯನ್ನು ಮನಗೊಂಡ ಅನೇಕ ಸಂಘ ಸಂಸ್ಥೆಗಳು ಕೊಂಡಜ್ಜಿಯವರ ಸೇವೆಯನ್ನು ಪಡೆಯಲು ಮುಂದಾದರು. ರಾಜ್ಯ ಸೆಕೆಂಡರಿ ಶಿಕ್ಷಣ ಬೋರ್ಡಿನ ಸದಸ್ಯರಾಗಿ ನಾಮಕರಣ, ಆರು ವರ್ಷಗಳ ಕಾಲ ಮೈಸೂರು ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸದಸ್ಯತ್ವ. ವೈದ್ಯಕೀಯ ಹಾಗೂ ಇಂಜಿನಿಯರಿಂಗ್ ಕಾಲೇಜುಗಳು ಪ್ರವೇಶ ಸಮಿತಿಗಳ ಸದಸ್ಯರಾಗಿ ಆಯ್ಕೆ. ದಾವಣಗೆರೆ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಣೆ. ತರಳಬಾಳುನಿಧಿ ಸಮಿತಿ, ಸಿರಿಗೆರೆ ಪ್ರೌಢಶಾಲೆ, ವಯಸ್ಕರ ಶಿಕ್ಷಣ ಸಮಿತಿ, ಚಿತ್ರದುರ್ಗದ ಲಂಬಾಣಿ ವಿದ್ಯಾರ್ಥಿ ನಿಲಯ, ಜಿಲ್ಲಾ ಕೃಷಿ ಒಕ್ಕೂಟ ಹೀಗೆ ಹಲವಾರು ಸಂಘಸಂಸ್ಥೆಗಳೊಂದಿಗೆ ನಿಕಟ ಬಾಂಧವ್ಯ. ಇವರ ಇರುವಿಕೆಯಿಂದ ಸಮಿತಿಗೆ, ಸಂಸ್ಥೆಗೆ ಘನತೆ ಬಂದಿತು.

### ಸಚಿವರಾಗಿ

1962ರ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧಿಸಿ ವಿಧಾನಸಭೆಗೆ ಚುನಾಯಿತರಾದರು. ಶ್ರೀ ಎಸ್. ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಉಪಸಚಿವರಾಗಿ ನೇಮಕವಾದರು. ಇದು ಅವರ ಯೋಗ್ಯತೆಗೆ ಸಂದ ಪುರಸ್ಕಾರ. ಐದು ವರ್ಷಗಳ ಕಾಲ ರಾಜ್ಯದ ಸಹಕಾರ–ಸಮಾಚಾರ ಮತ್ತು ಅಬ್ಕಾರಿ ಖಾತೆಗಳಲ್ಲಿ ದಕ್ಷತೆಯಿಂದ ಕೆಲಸ ಮಾಡಿದರು. ತಾವು ವಹಿಸಿಕೊಂಡ ಇಲಾಖೆಗಳಿಗೆ ಒಂದು ಹೊಸ ಆಯಾಮ ತಂದುಕೊಟ್ಟರು.

ಅಧಿಕಾರ, ಪದವಿಗಳು ದೊರೆತಾಗ ಕೆಲವರು ಬದಲಾಗುವುದುಂಟು. ಕೊಂಡಜ್ಜಿಯವರು ಇದಕ್ಕೆ ಅಪವಾದ. "ಸದಃ ವಿನಯವೇ ಸದಾ ಶಿವನ ಒಲುಮೆ" ಎಂಬ ತತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡವರು. ಮಂತ್ರಿಯಾಗಿದ್ದಾಗಲೂ ಯಾರು ಬೇಕಾದರೂ ಸುಲಭವಾಗಿ ಅವರನ್ನು ಭೆಟ್ಟಿಯಾಗಿ ಕಷ್ಟ ಸುಖಗಳನ್ನು ಹೇಳಿಕೊಳ್ಳಬಹುದಾಗಿತ್ತು. ಅವರಲ್ಲಿ ಅಧಿಕಾರಿ–ನೌಕರ, ಮೇಲು–ಕೀಳು ಎಂಬ ತಾರತಮ್ಯ ಭಾವನೆ ಇರಲಿಲ್ಲ. ಸಹಾಯ ಕೋರಿ ಬಂದವರನ್ನು ಗೌರವದಿಂದ ಕಂಡು ತಮ್ಮ ಕೈಲಾದ ಸಹಾಯ ಮಾಡುತ್ತಿದ್ದರು. ಬಲಗೈಲಿ ಕೊಟ್ಟದ್ದು ಎಡಗೈಗೆ ತಿಳಿಯಬಾರದು ಎಂಬ ತಾತ್ವಿಕ ದೃಷ್ಟಿ. ಒಬ್ಬರಿಗೆ ಸಹಾಯ ಮಾಡಿದ್ದನ್ನು ಮತ್ತೊಬ್ಬರ ಮುಂದೆ ಎಂದೂ ಹೇಳಿದವರಲ್ಲ!

### ಪಂಚಾಯತ್ ರಾಜ್ ಸಮಿತಿ

ಗ್ರಾಮ ಮಟ್ಟದಲ್ಲಿ ಆಡಳಿತ ವಿಕೇಂದ್ರೀಕರಣವಾಗಬೇಕು ಎಂದು ಭಾವಿಸಿದ್ದ ಆಗಿನ ಸರ್ಕಾರ, ಅಧಿಕಾರ ಯಾವ ಯಾವ ಹಂತದಲ್ಲಿ ವಿಕೇಂದ್ರೀಕರಣವಾಗಬೇಕು ಎಂಬುದನ್ನು ವರದಿ ಮಾಡಲು ಕೊಂಡಜ್ಜಿಯವರನ್ನು 'ಪಂಚಾಯತ್ ರಾಜ್' ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿತು. ತಮ್ಮ ಅಪಾರವಾದ ಪಾಂಡಿತ್ಯ ಹಾಗೂ ಆಳವಾದ ಅನುಭವದಿಂದ ಉತ್ತಮ ವರದಿಯನ್ನು ಸಲ್ಲಿಸಿದರು. ಈ ವರದಿ ರಾಜ್ಯ ಹಾಗೂ ದೇಶದ ನಾಯಕರ ಮೆಚ್ಚಿಗೆ ಪಡೆಯಿತು. ವರದಿ ವಿಧಾನ ಸಭೆಯಲ್ಲಿ ಮಂಡಿಸಲ್ಪಟ್ಟು ಭಾಗಾಂಶ ಚರ್ಚೆಯಾದ ನಂತರ ಕೆಲವು ಕ್ಷುಲ್ಲಕ ರಾಜಕೀಯ ಕಾರಣದಿಂದ ಮೂಲೆ ಗುಂಪಾಯಿತು. ಅಲ್ಲದೆ ಕೈಮಗ್ಗ ಸಲಹಾ ಮಂಡಳಿ ಹಾಗೂ ರಾಜ್ಯದ ದಾಸ್ತಾನು ಕಾರ್ಪೊರೇಷನ್ನಿನ ಭಾರತ್ ಸೇವಕ್ ಸಮಾಜದ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದರು.

1967ರಲ್ಲಿ ಮತ್ತೆ ವಿಧಾನ ಸಭೆಗೆ ಆಯ್ಕೆಯಾದರು. ಆದರೆ ಮಂತ್ರಿಯಾಗಲಿಲ್ಲ. ಸದಾ ಪಾದರಸದಂತೆ ಇದ್ದ ಬಸಪ್ಪನವರು ಸುಮ್ಮನೆ ಕೂರಲಿಲ್ಲ. ಮತ್ತೆ ಹಳೇ ವಕೀಲ ವೃತ್ತಿಗೆ ತನ್ನನ್ನು ತೊಡಗಿಸಿಕೊಂಡರು. 1971ರಲ್ಲಿ ವಿಧಾನಸಭೆಗೆ ರಾಜೀನಾಮೆ ಸಲ್ಲಿಸಿ ಲೋಕಸಭೆಗೆ ಸ್ಪರ್ಧಿಸಿ ಜಯಗಳಿಸಿದರು. 1972ರ ಫೆಬ್ರವರಿಯಲ್ಲಿ ಕೇಂದ್ರದ ಸರ್ಕಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಉಪ ಸಚಿವರಾಗಿ ಪ್ರಮಾಣವಚನ ಸ್ವೀಕರಿಸಿ 32 ತಿಂಗಳ ಕಾಲ ತಮ್ಮ ಅಮೂಲ್ಯ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ರಾಜ್ಯದಲ್ಲಿ ಕುಷ್ಠರೋಗ ನಿವಾರಣಾ ಕೇಂದ್ರ ಸ್ಥಾಪಿಸಿ ಕರ್ನಾಟಕಕ್ಕೆ ಉತ್ತಮ ಕೊಡುಗೆ ನೀಡಿದರು. 1977ರಲ್ಲಿ ದಾವಣಗೆರೆ ಲೋಕಸಭಾ ಕ್ಷೇತ್ರದಿಂದ ಪುನರಾಯ್ಕೆಯಾದರು. ಕರ್ನಾಟಕ ಸರ್ಕಾರ 1982ರಲ್ಲಿ ಕೊಂಡಜ್ಜಿಯವರು ಸೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸಲ್ಲಿಸಿದ ಗಣನೀಯ ಸೇವೆಗೆ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿತು.

### ಸಂತೃಪ್ತ ಕುಟುಂಬ

ಕೊಂಡಜ್ಜಿಯವರದು ಅನುರೂಪ ಹಾಗೂ ಅಪರೂಪದ ದಾಂಪತ್ಯ ಜೋಡಿ. ಇಚ್ಛೆಯನ್ನರಿತು ನಡೆಯುವ ಕಷ್ಟ ಸುಖಗಳಲ್ಲಿ ಸ್ಪಂದಿಸುವ ಪತ್ನಿ. ಈ ದಂಪತಿಗಳಿಗೆ ಎಂಟು ಮಕ್ಕಳು. ಆರತಿಗೆ ಒಬ್ಬ ಮಗಳು, ಕೀರ್ತಿಗೆ ಏಳು ಜನ ಗಂಡು ಮಕ್ಕಳು. ಎಲ್ಲ ವಿನಯಶಾಲಿಗಳು, ಜನಾನುರಾಗಿಗಳು; ಸದ್ಗುಣಿಗಳು, ಈ ಎಲ್ಲ ಗುಣಗಳು ತಂದೆ ತಾಯಿಯಿಂದ ಬಂದ ಬಳುವಳಿ. ಕೊಂಡಜ್ಜಿಯವರು ಮಾಡಿದ ಸಾಧನೆ ಗಳಿಸಿದ ಯಶಸ್ಸಿಗೆ ಪ್ರೇರಕ ಶಕ್ತಿ ಪತ್ನಿ ಸರ್ವಮಂಗಳಮ್ಮ. ಯಾವುದೇ ಸಂದರ್ಭದಲ್ಲಿ ಸಂಸಾರದ ತಾಪತ್ರಯಗಳನ್ನು ಗಂಡನ ಗಮನಕ್ಕೆ ತಾರದೆ, ಸಮಾಜಸೇವೆ ಮಾಡಲು ಬಿಟ್ಟು ಕೊಟ್ಟ ಮಹಾ ತ್ಯಾಗಿ. ಅವರ ದಾಂಪತ್ಯ ಜೀವನ ಇತರರಿಗೆ ಆದರ್ಶ!

## ಸ್ಕೌಟ್ ಚಳುವಳಿ

ಕೊಂಡಜ್ಜಿಯವರಿಗೆ ಅತ್ಯಂತ ಪ್ರಿಯವಾದ ಸಂಸ್ಥೆ ಎಂದರೆ ಸ್ಕೌಟ್ ಮತ್ತು ಗೈಡ್ಸ್ ಅವರಲ್ಲಿ ಮನೆ ಮಾಡಿ ಕೊಂಡಿದ್ದ ಶಿಸ್ತು, ತಾಳ್ಮೆ, ಕಷ್ಟ ಸಹಿಷ್ಣುತೆ, ಪರೋಪಕಾರ, ಮಾನವೀಯತೆ, ಸ್ಕೌಟನಿಂದ ಅವರಿಗೆ ಬಂದವೋ ಅಥವಾ ಬಸಪ್ಪನವರಿಂದ ಸ್ಕೌಟಿಗೆ ಬಂದವೋ ಎನ್ನುವಷ್ಟು ತಾದ್ಯಾತ್ಮತೆ. ಸ್ವಯಂಸೇವೆಯ ಮಹತ್ವವೇ ಅರ್ಥವಾಗದಿರುವ ಈ ದಿನಗಳಲ್ಲಿ ಕೊಂಡಜ್ಜಿಯವರಂತಹ ನಿಷ್ಠಾವಂತ ಸ್ಕೌಟುಗಳು ತುಂಬಾ ವಿರಳ. 40 ವರ್ಷಗಳ ಕಾಲ ಅವಿಚ್ಛಿನ್ನವಾಗಿ ಈ ಸಂಸ್ಥೆಯಲ್ಲಿ ವಿವಿಧ ಹುದ್ದೆಗಳಲ್ಲಿ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ ಹೆಗ್ಗಳಿಕೆ. ದಾವಣಗೆರೆಯಲ್ಲಿ ಸ್ಕೌಟ್ಸ್-ಗೈಡ್ಸ್‌ನ ಸಹಾಯಕ ಕಮಿಷನರ್ ನಂತರ ಸಹಾಯಕ ರಾಜ್ಯ ಕಮಿಷನರ್ ಆಗಿ ಸೇವೆ ಸಲ್ಲಿಸಿ ಅಪಾರವಾದ ಅನುಭವವನ್ನು ತನ್ನದಾಗಿಸಿಕೊಂಡರು. ರಾಜ್ಯದ ಉಪಸಚಿವರಾಗಿದ್ದಾಗ ರಾಜ್ಯದ ಸ್ಕೌಟ್ಸ್-ಗೈಡ್ಸ್‌ನ ಕಾರ್ಯದರ್ಶಿಯಾದರು. ಪ್ರೊ. ಪಿ. ಶಿವಶಂಕರ್‌ರವರ ನಂತರ ರಾಜ್ಯದ ಚೀಫ್ ಕಮಿಷನರ್ ಆಗಿ 18 ವರ್ಷಗಳ ಕಾಲ ಪ್ರಾಮಾಣಿಕವಾಗಿ ದುಡಿದು ಸ್ಕೌಟ್ಸ್ ಸಂಸ್ಥೆಗೆ ಭದ್ರ ಬುನಾದಿಯನ್ನು ಹಾಕಿದರಲ್ಲದೆ ಘನತೆ ಗೌರವವನ್ನು ತಂದು ಕೊಟ್ಟರು.

## ವಿದೇಶ ಪ್ರವಾಸ

1951ರಲ್ಲಿ ಆಸ್ಟ್ರಿಯಾದಲ್ಲಿ ನಡೆದ ವಿಶ್ವ ಜಾಂಬೂರಿಯಲ್ಲಿ ಭಾಗವಹಿಸಿದ ಕೊಂಡಜ್ಜಿಯವರು, ಇಟಲಿ, ಸ್ವಿಟ್ಜರ್ಲೆಂಡ್, ಜರ್ಮನಿ, ಫ್ರಾನ್ಸ್, ಡೆನ್ಮಾರ್ಕ್, ಬ್ರಿಟನ್ ಹಾಗೂ ಸಿಲೋನ್ ದೇಶಗಳಲ್ಲಿ, 1972ರಲ್ಲಿ ನೈರೋಬಿಯದಲ್ಲಿ ನಡೆದ 24ನೆಯ ಅಂತರ ರಾಷ್ಟ್ರೀಯ ಸ್ಕೌಟ್ಸ್ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದರು. ಅವರು ವಿದೇಶ ಪ್ರವಾಸ ಮಾಡಿದ್ದರಿಂದ ಸ್ಕೌಟ್ಸ್ ಸಂಸ್ಥೆಗೆ ಹೆಚ್ಚು ಲಾಭವಾಯಿತು.

ಸ್ಕೌಟ್, ಕೊಂಡಜ್ಜಿ ಬಸಪ್ಪನವರ ಜೀವನದ ಉಸಿರಾಗಿತ್ತು, ಹಸಿರಾಗಿತ್ತು. ಅವರು ಭಾರತ ಸ್ಕೌಟ್ಸ್, ಗೈಡ್ಸ್‌ನ ರಾಷ್ಟ್ರೀಯ ಪರಿಷತ್ತು ಹಾಗೂ ವ್ಯವಸ್ಥಾಪಕ ಸಮಿತಿಯ ಸದಸ್ಯರಾಗಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸುವುದರ ಮೂಲಕ ರಾಜ್ಯದ ಸ್ಕೌಟ್ಸ್ ಚಳುವಳಿಗೆ ಪ್ರೇರಕಶಕ್ತಿಯಾದರು. ಅವರ ಸೇವಾವಧಿಯಲ್ಲಿ ಸ್ಕೌಟ್ಸ್ ಗೈಡ್ಸ್‌ಗಳ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಏರಿದುದು ಅವರ ಕಾರ್ಯದಕ್ಷತೆಯ ದ್ಯೋತಕ. ಇಂದು ರಾಜ್ಯದಲ್ಲಿ ಸುಮಾರು 1 ಲಕ್ಷ ಸ್ಕೌಟ್ಸ್ ಮತ್ತು ಗೈಡುಗಳಿದ್ದಾರೆ. ರಾಜ್ಯದ ಅನೇಕ ಜಿಲ್ಲಾ ಕೇಂದ್ರಗಳಲ್ಲಿ ಸ್ಕೌಟ್ಸ್‌ಗಾಗಿ ಪ್ರತ್ಯೇಕ ಕಟ್ಟಡವನ್ನು ಹೊಂದುವ ದಿಸೆಯಲ್ಲಿ ಕೊಂಡಜ್ಜಿಯವರು ಮಾಡಿರುವ ಸಹಾಯ ಅವಿಸ್ಮರಣೀಯ.

ದೊಡ್ಡಬಳ್ಳಾಪುರದ 'ಅನಿಬೆಸೆಂಟ್' ಪಾರ್ಕ್ ಇಂದು ಭಾರತದಲ್ಲೇ ಅತ್ಯುತ್ತಮ ಶಿಬಿರ. ಈ ಶಿಬಿರದ ಸರ್ವತೋಮುಖ ಅಭಿವೃದ್ಧಿಗೆ ಕೊಂಡಜ್ಜಿಯವರು ಸಲ್ಲಿಸಿದ ಕಾಣಿಕೆ ಚರಿತ್ರಾರ್ಹ. ಬಯಲು ರಂಗಮಂಟಪ, ಗಾಂಧಿಭವನ, ವಜ್ರಮಹೋತ್ಸವ ಭವನ, ದೋಣಿ-ಮನೆ, ಶಿಬಿರಾಗ್ನಿ ವೃತ್ತ ಇವೆಲ್ಲ ಶಿಬಿರದ ಮೈಲಿಗಲ್ಲುಗಳು.

## ಕೊಂಡಜ್ಜಿಯ ಅಭಿವೃದ್ಧಿ

ಒಂದು ಕಾಲದಲ್ಲಿ ಹೊರಜಗತ್ತಿನ ಸಂಪರ್ಕದಿಂದ ವಂಚಿತವಾಗಿ ಕುಗ್ರಾಮವಾಗಿದ್ದ ಕೊಂಡಜ್ಜಿ, ಬಸಪ್ಪನವರಿಗೆ ಹುಟ್ಟಿದೂರಿನ ಬಗ್ಗೆ ಇದ್ದ ಅಭಿಮಾನ, ಗೌರವ, ಅಪಾರವಾದ ಕಳಕಳಿ, ದೂರದೃಷ್ಟಿಯಿಂದ ಇಂದು ಕೊಂಡಜ್ಜಿ ಎಲ್ಲಾ ರೀತಿಯ ನಾಗರಿಕ ಸೌಲಭ್ಯಗಳನ್ನು ಹೊಂದಿದ ಮಾದರಿ ಗ್ರಾಮವನ್ನಾಗಿ ಮಾಡುವುದರ ಮೂಲಕ ಹುಟ್ಟಿದ ಹಳ್ಳಿಯ ಋಣವನ್ನು ತೀರಿಸಿದ್ದಾರೆ. ಬಸಪ್ಪನವರಿಂದ ಕೊಂಡಜ್ಜಿ ಬೆಳಗಿತು. ಕೊಂಡಜ್ಜಿ ಎಂದಾಕ್ಷಣ ಥಟ್ಟನೆ ನಮಗರಿವಿಲ್ಲದೆ ನೆನಪಾಗುವುದು ಬಸಪ್ಪನವರ ಹೆಸರು. ಇಂತಹ ನಿಸ್ವಾರ್ಥ ತ್ಯಾಗ ಮನೋಭಾವವುಳ್ಳ ಸಾಮಾಜಿಕ ಕಾರ್ಯಕರ್ತರು ಹಳ್ಳಿಗೊಬ್ಬರು, ಜಿಲ್ಲೆಗೊಬ್ಬರಿದ್ದರೆ ಸಾಕು ಗಾಂಧೀಜಿಯವರ ಕಲ್ಪನೆಯ ರಾಮರಾಜ್ಯದ ಕನಸು ನನಸಾಗುತ್ತದೆ.

## ಕೊಂಡಜ್ಜಿ ಶಿಬಿರ

ಶ್ರೀ ಬಸಪ್ಪನವರು ವಿದೇಶ ಪ್ರವಾಸದಿಂದ ಪಡೆದಜ್ಞಾನ ಅನುಭವವನ್ನು ಕೊಂಡಜ್ಜಿ ಶಿಬಿರದಲ್ಲಿ ಸಮರ್ಪಕವಾಗಿ ಬಳಸಿಕೊಂಡಿದ್ದಾರೆ. ನೂರು ಎಕರೆ ವಿಸ್ತೀರ್ಣದ ನಿಸರ್ಗ ಸುಂದರ ತಾಣದಲ್ಲಿ ಕಂಗೊಳಿಸುತ್ತಿರುವ ಸ್ಕೌಟ್ ಶಿಬಿರ

ಉತ್ತರ ಕರ್ನಾಟಕ ಸ್ಕೌಟ್ಸ್-ಗೈಡ್ಸ್‌ಗಳ ಅಗತ್ಯವನ್ನು ಪೂರೈಸುವಲ್ಲಿ ಸಫಲವಾಗಿದೆ.

ಕೊಂಡಜ್ಜಿ ಶಿಬಿರದ ಯೋಜನೆ ಕಾರ್ಯರೂಪಕ್ಕೆ ಬರಲು ದಾವಣಗೆರೆಯ ಧರ್ಮ ರತ್ನಾಕರ ಶ್ರೀ ಮದ್ದೂರಾಯಪ್ಪ ಮತ್ತು ಅವರ ಸಹೋದರ ಲಕ್ಷ್ಮಣಶೆಟ್ಟಿ ಅವರು ನೀಡಿದ 25 ಸಾವಿರ ರೂಗಳ ಉದಾರ ಕೊಡುಗೆ ನಾಂದಿಯಾಯಿತು. ಸ್ಕೌಟ್ಸ್‌ಗಳ ಉಪಯೋಗಕ್ಕಾಗಿ ಸರೋವರದ ಎದುರು ತಲೆಎತ್ತಿ ನಿಂತಿರುವ "ಅತಿಥಿ ಗೃಹ" "ಪೈರೆಸ್" ಯೋಜನೆಯ ನೆರವು ಪಡೆದು ಶಿಬಿರದಲ್ಲಿ ಆಟದ ಮೈದಾನ ಪೆರೇಡ್ ಮೈದಾನ, ಶಿ ಬಿ ರಾ ಗ್ನಿ ಮತ್ತು ರಸ್ತೆಗಳು ಮುಂತಾದ ಸೌಕರ್ಯಗಳನ್ನು ಕಲ್ಪಿಸಲಾಗಿದೆ. ಅಷ್ಟ ಕೋನಾಕಾರದ ಗೋಪುರ ಜಯಣ್ಣ ಚಗಟೇರಿ ಅವರ ಹೆಸರಲ್ಲಿ ನಿರ್ಮಾಣಗೊಂಡಿದೆ. ಅರಣ್ಯ ಇಲಾಖೆಯ ಸಹಕಾರದಿಂದ ಬಗೆಬಗೆಯ ಗಿಡಮರಗಳಿರುವ ವೃಕ್ಷರಾಶಿ ಹರಿಹರ ಪಾಲಿಫೈಬರ್ಸ್ ಅವರ ಎರಡು ಲಕ್ಷ ರೂಗಳ ಉದಾರ ಕೊಡುಗೆಯಿಂದ ಈಜುಕೊಳ ನಿರ್ಮಾಣವಾಗಿದೆ ಕೊಂಡಜ್ಜಿಯವರ ಕಲ್ಪನೆಯ ಈ ಶಿಬಿರ ಬೃಹದಾಕಾರವಾಗಿ ಬೆಳೆಯುತ್ತಿದೆ.

ಕೊಂಡಜ್ಜಿಯವರ ಯಶಸ್ಸಿನ ಗುಟ್ಟು, ಅವರ ನಿಸ್ವಾರ್ಥ ಸೇವೆ. ಹಿಡಿದ ಕೆಲಸವನ್ನು ಮಾಡಿ ಮುಗಿಸಬೇಕೆನ್ನುವ ಹಠ, ನಿರಾಡಂಭರ ವ್ಯಕ್ತಿತ್ವ, ಪ್ರೀತಿ ವಿಶ್ವಾಸ, ಕಾಯಕ ನಿಷ್ಠೆ, ಕ್ರಿಯಾಶೀಲತೆ, ಈ ಎಲ್ಲಾ ಗುಣಗಳು ಒಬ್ಬ ವ್ಯಕ್ತಿಯಲ್ಲಿ ಮೇಳೈಸುವುದು ತುಂಬಾ ಅಪರೂಪ. ಅಧಿಕಾರ ಪದವಿ, ಕೀರ್ತಿಯನ್ನು ಕೊಂಡಜ್ಜಿಯವರು ಎಂದೂ ಬಯಸಿದವರಲ್ಲ. ಅವೇ ಇವರನ್ನು ಹಿಂಬಾಲಿಸಿಕೊಂಡು ಬಂದವು ಜೆನ್ನಟ್ಟಿದ ಬೇತಾಳದಂತೆ. ಕೊಂಡಜ್ಜಿ ಅವರ ವ್ಯಕ್ತಿತ್ವವನ್ನು ಪರಿಚಯ ಮಾಡುವುದು ಕನ್ನಡಿಯಲ್ಲಿ ಕರಿಯನ್ನು ಅಡಗಿಸಿದಂತೆ.

ಸದಾ ಚೈತನ್ಯದ ಚಿಲುಮೆಯಾಗಿ ಪುಟಿಯುತ್ತಿದ್ದು ಸಕಲ ಜೀವಕ್ಕೆ ಲೇಸನ್ನೇ ಬಯಸಿದ ಮಹಾ ಚೇತನ ಅನುಭಾವಿ ಕೊಂಡಜ್ಜಿ ಅವರ ಆತ್ಮ ಜ್ಯೋತಿ ದಿನಾಂಕ 14-11-1982 ರಂದು ಶಿವನಲ್ಲಿ ಲೀನವಾಯಿತು. ಇರುವಷ್ಟು ಕಾಲವೂ ಸಮಾಜದ ಒಳಿತನ್ನೇ ಮಾಡಿದರು. ಅವರ ಅಗಲಿಕೆ ನಾಡಿಗೆ, ರಾಷ್ಟ್ರಕ್ಕೆ ತುಂಬಲಾರದ ನಷ್ಟ. ಅವರು ನಮ್ಮ ಮುಂದೆ ಇಲ್ಲದೆ ಇದ್ದರೂ ಅವರು ಮಾಡಿದ ಕೆಲಸಗಳು ನಮ್ಮ ಕಣ್ಮುಂದೆ ರಾರಾಜಿಸುತ್ತಿವೆ. ಕೊಂಡಜ್ಜಿಯವರ ಹೆಸರು ಸದಾ ಹಚ್ಚಹಸಿರು.



# ದೇವಮಾನವ 'ಕೊಂಡಜ್ಜಿ'

ಎನ್. ಎಂ. ಗುರುಸ್ವಾಮಿ

"ಕೊಂಡಜ್ಜಿ" ಎನ್ನುವುದು ಅವರ ಆತ್ಮೀಯರು ಹಾಗೂ ಹಿತೈಷಿಗಳು ಕರೆಯುವ ಪ್ರೀತಿಯ ಹೆಸರು ಅನ್ವರ್ಥ ನಾಮವಾಗಿತ್ತು–ಕೊಂಡಜ್ಜಿ ಬಸಪ್ಪನವರಿಗೆ.

ಇವರು ಸರಳ, ಸುಂದರ, ಮತ್ತು ಸಜ್ಜನಿಕ. ಹೊಗಳಿಕೆ ತೆಗಳಿಕೆಗಳಿಗೆ ಹಿಗ್ಗಿ ಕುಗ್ಗುವರಲ್ಲ-ಅಧಿಕಾರ ಇದ್ದಾಗ, ಇಲ್ಲದಾಗ ಒಂದೇ ಸ್ವಭಾವ. ಹಣವಂತು ಗಳಿಸಲಿಲ್ಲ–ಗಳಿಸುವ ವಿಧಾನವೂ ತಿಳಿಯದು. ಜನಗಳನ್ನು ಗಳಿಸಿ ಜನಾನುರಾಗಿಗಳಾದರು. ಬಡವ ಶ್ರೀಮಂತರೆಂಬ ಭಿನ್ನ ಭೇದವಿಲ್ಲ–ಎಲ್ಲರನ್ನು ಒಂದೇ ರೀತಿ ಕಾಣುವ ನಡವಳಿಕೆ. ಒಂದು ಸಣ್ಣ ಹಳ್ಳಿಯ ಸಾಧಾರಣ ಕುಟುಂಬದಲ್ಲಿ ಜನಿಸಿ ಬೆಳೆದು ವಿದ್ಯಾವಂತರಾಗಿ ಸ್ವಶಕ್ತಿ, ಸ್ವಸಾಮರ್ಥ್ಯದಿಂದ ದೇಶಕ್ಕೆ ಬೆಳಕಾದರು.

ಅನೇಕ ಸಂಘ ಸಂಸ್ಥೆಗಳ ಸ್ಥಾಪಕರಾಗಿ, ಸದಸ್ಯರಾಗಿ ಸಾರ್ವಜನಿಕ ಸೇವೆ ಮಾಡಿ ಸಮಾಜ ಸೇವಾಧುರೀಣರಾದರು. ಶಾಸನಸಭೆ, ಲೋಕಸಭೆ ಸದಸ್ಯರಾದರು, ರಾಜ್ಯ ಮತ್ತು ಕೇಂದ್ರ ಸರ್ಕಾರಗಳಲ್ಲಿ ಸಚಿವ ಪದವಿ ಸ್ವೀಕರಿಸಿದರು. ಯಾವುದೇ ಪದವಿಗಳಲ್ಲಿದ್ದರೂ ಸಾರ್ವಜನಿಕರಲ್ಲಿ ಸರ್ವೇಸಾಮಾನ್ಯರಲ್ಲಿ ಸರಳ ವ್ಯಕ್ತಿಗಳಾಗಿರುತ್ತಿದ್ದರು. ಯಾರು ಬೇಕಾದರೂ ಯಾವ ಸಂದರ್ಭದಲ್ಲಾದರೂ ಅವರನ್ನು ಕಂಡು ಸಲಹೆ, ಸೂಚನೆ, ಸಹಾಯಗಳನ್ನು ಪಡೆಯಬಹುದಾಗಿತ್ತು.

ಅವರು ಆಜೀವಪರ್ಯಂತ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪದಾಧಿಕಾರಿಯಾಗಿದ್ದು–ಸಂಸ್ಥೆಯ ಪವಿತ್ರ ತತ್ವ ಮತ್ತು ನಿಯಮಗಳಂತೆ ಜೀವನ ನಡೆಸಿ ಸಂಸ್ಥೆಯ ಕಾರ್ಯಕರ್ತರಿಗೆ ಆದರ್ಶವಾಗಿದ್ದರು ಸಂಸ್ಥೆಗೆ ಒಂದು ಶಕ್ತಿಯಾಗಿದ್ದರು.

ಅವರ ರಚನಾತ್ಮಕ ಕಾರ್ಯಗಳಲ್ಲಿ ಸ್ಥಾಪನೆಯಾಗಿರುವುದು ಕೊಂಡಜ್ಜಿಯಲ್ಲಿರುವ ಸಂಸ್ಥೆಯ ತರಬೇತಿ ಶಿಬಿರ. ಈ ಶಿಬಿರವು ಪ್ರಕೃತಿ ಕೊಡುಗೆಯ ಒಂದು ರಮ್ಯ ಸ್ಥಳವಾಗಿದ್ದು ಪ್ರವಾಸಿಗರನ್ನು ಆಕರ್ಷಿಸುವ ಒಂದು ಸುಂದರ ಕ್ಷೇತ್ರವಾಗಿದೆ. ಆದರ ಪೂರ್ತಿ ಬೆಳವಣಿಗೆಗೆ ಅವರಲ್ಲಿ ಇನ್ನೂ ಅನೇಕ ಆಸೆ ಆಕಾಂಕ್ಷೆಗಳಿದ್ದುವು. ಈ ಶಿಬಿರದ ಶ್ರೇಯೋಭಿವೃದ್ಧಿಗೆ ಅವರು ತನು–ಮನ–ಧನಗಳನ್ನರ್ಪಿಸಿದರು. ಸದಾಕಾಲವೂ ಈ ಶಿಬಿರದ ಅಭಿವೃದ್ಧಿಗಾಗಿ ಚಿಂತಿಸಿ ಕಾರ್ಯಪ್ರವರ್ತರಾಗಿರುತ್ತಿದ್ದರು.

ಸಂಸ್ಥೆಯವರು ಇವರ ಸೇವೆಗೆ ಕೃತಜ್ಞರಾಗಿ ಇವರು ಶಿವಸಾಯುಜ್ಯವನ್ನು ಪಡೆದ ನಂತರ ದೇಹವನ್ನು ಪವಿತ್ರ ಕ್ಷೇತ್ರವಾದ ಕೊಂಡಜ್ಜಿ ತರಬೇತಿ ಶಿಬಿರದಲ್ಲಿ ಸಮಾಧಿ ಮಾಡಿ ಸುಂದರವಾದ ಗದ್ದುಗೆಯನ್ನು ನಿರ್ಮಿಸಿದ್ದಾರೆ ಈಗ ಅವರ ಕಂಚಿನ ಪ್ರತಿಮೆಯನ್ನು ಪ್ರತಿಷ್ಠೆಗೊಳಿಸುತ್ತಿದ್ದಾರೆ. ಈ ಪವಿತ್ರ ಕ್ಷೇತ್ರಕ್ಕೆ ಅವರ ಸ್ಮರಣಾರ್ಥ "ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಶಿಬಿರ ಕೇಂದ್ರ"ವೆಂದು ನಾಮಕರಣ ಮಾಡಿರುತ್ತಾರೆ.

ಕೊಂಡಜ್ಜಿಯವರು ಅಪಾರ ಆಸ್ತಿಯನ್ನು ಮಾಡಿ ಹೋಗಿರುತ್ತಾರೆ. ಅವರ ಹೆಂಡತಿ, ಮಕ್ಕಳಿಗಲ್ಲ–ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ–ಅವರ ಮಕ್ಕಳು ಸ್ವಶಕ್ತಿಯಿಂದ ದುಡಿದು ಸಂಪಾದನೆ ಮಾಡಿ ಗೌರವದಿಂದ ಜೀವನ ಮಾಡುತ್ತಿದ್ದಾರೆ. ಮಕ್ಕಳಿಗೆ ಪಿತ್ರಾರ್ಜಿತ ಆಸ್ಥಿ, ಹಣ, ಸಂಪತ್ತು ಏನೂ ಮಾಡಲಿಲ್ಲ–ಅವರು ಮಾಡಿದ್ದು ಎಲ್ಲಾ ಸಂಸ್ಥೆಗಾಗಿ ಮತ್ತು ಸಾರ್ವಜನಿಕರಿಗಾಗಿ–ಅವರಿಗಿದ್ದ ಜ್ಞಾನ, ಅಧಿಕಾರ,

ಪ್ರಭಾವ (Influence) ದಿಂದ ಅನೇಕರು ಮಾಡಿ ಕೊಂಡಿರುವಂತೆ ಬೇಕಾದಷ್ಟು ಐಶ್ವರ್ಯ ಮತ್ತು ಸಂಪತ್ತು ಆಸ್ತಿಗಳನ್ನು ಮಾಡಬಹುದಾಗಿತ್ತು. ಆದರೆ ನಿಸ್ವಾರ್ಥ ಭಾವನೆಯಿಂದ ಅದಾವುದಕ್ಕೂ ಆಸೆ ಪಡಲಿಲ್ಲ. ದಾವಣಗೆರೆಯಲ್ಲಿ ವಾಸಿಸಲು ಇದ್ದ ಒಂದು ಮನೆಯನ್ನು ಇದ್ದ ಒಬ್ಬ ಮಗಳಿಗೆ ಗಂಡು ಮಕ್ಕಳಿಗಾರಿಗೂ ತಿಳಿಸದೆ ದಾನ ಬರೆದರು. ಇದೂ ಸಹ ಎಲ್. ಐ. ಸಿ. ಯಿಂದ ಸಾಲ ಪಡೆದು ಕಟ್ಟಿಸಿದ್ದು. ಗಂಡು ಮಕ್ಕಳು ಏಳು ಜನ ರಿಗೆ, ನಿಮ್ಮನ್ನು ಸಾಕಿ ಸಲಹಿ ವಿದ್ಯಾ ಬುದ್ಧಿ ಕಲಿಸಿ ದೊಡ್ಡವರನ್ನಾಗಿ ಮಾಡಿದೆ. ನಿಮ್ಮ ನಿಮ್ಮ ಜೀವನಮಾರ್ಗ ಗಳನ್ನು ಕಂಡು ಉತ್ತಮರಾಗಿ ಜೀವಿಸಿರಿ ಎಂದು "ಕಾಯಕವೇ ಕೈಲಾಸ"ವೆಂಬ ತತ್ವೋಪದೇಶ ನೀಡಿದರು. ಧರ್ಮಪತ್ನಿ ಶ್ರೀಮತಿ ಸರ್ವ ಮಂಗಳಮ್ಮನವರೊಂದಿಗೆ ಒಂದು ಸಾರಿ ಕಾರಿನಲ್ಲಿ ಪ್ರಯಾಣ ಮಾಡುವಾಗ ಅವರ ಪತ್ನಿಯವರು ನಿಮಗೆ ಒಬ್ಬ ಮಗನಿದ್ದು ಏಳು ಜನ ಹೆಣ್ಣು ಮಕ್ಕಳಿರಬೇಕಾ ಗಿತ್ತು ಎಂದು ಹೇಳಿದರು. ಅದಕ್ಕೆ ಅವರು, "ದೇವರಿಗೆ ಗೊತ್ತು ಅದಕ್ಕೇ ಹಂಗೆ ಹಾಗಿಲ್ಲ" ಎಂದು ನಗುತ್ತ ಉತ್ತರ ನೀಡಿದರು.

ಕೊಂಡಜ್ಜಿಯವರು ಎಲ್ಲಿಯೇ ಇರಲಿ ಅವರನ್ನು ಕಾಣಲು ಅಧಿಕಾರಿಗಳು, ಮಿತ್ರರು ಅಥವಾ ಇವರಿಂದ ಏನಾದರೂ ಕೆಲಸ ಮಾಡಿಸಿಕೊಳ್ಳುವವರು ಬರುತ್ತಿದ್ದರು. ಬಂದವರಿಗೆ ಕಾಲಕ್ಕೆ ತಕ್ಕಂತೆ ಅವರಿಗೆ ಊಟ, ಉಪಹಾರ ಪಾನೀಯ ಕೊಡಿಸುತ್ತಿದ್ದರು. "ಅತಿಥಿ ದೇವೋ ಭವ" ಎನ್ನುವ ಮನೋಭಾವನೆ ಅವರಲ್ಲಿ ಇತ್ತು. ಆದರೆ ಅವರ ಡ್ರೈವರುಗಳನ್ನು ಮರೆಯದೆ ಕರೆಯಿಸಿ ಅವರಿಗೂ ಆತಿಥ್ಯ ನೀಡುತ್ತಿದ್ದರು. ಯಾವುದಾದರೂ ಸಭೆ, ಸಮಾರಂಭ, ರ್‍ಯಾಲಿ ಮತ್ತು ಜಾಂಬೂರಿ ಮುಂತಾದವು ಗಳಾದಾಗ ಉಪಹಾರ, ಊಟದ ವ್ಯವಸ್ಥೆಗಳು ಇದ್ದೇ ಇರುತ್ತಿದ್ದವು. ಅಂತಹ ಸಂದರ್ಭಗಳಲ್ಲಿ ಎಲ್ಲರದೂ ಊಟ ವಾದ ಮೇಲೆ ಜವಾನರು, ಕಾರ್ಯಕರ್ತರು, ಡ್ರೈವರು ಗಳು ಮುಂತಾದವರುಗಳನ್ನೆಲ್ಲಾ ಹುಡುಕಿಸಿ ಕರೆಯಿಸಿ ಅವರೊಂದಿಗೆ ಊಟ ಮಾಡುತ್ತಿದ್ದರು. ಅವರಲ್ಲಿ ಇಂತಹ ದಾಸೋಹ ಮನೋಭಾವ ಮತ್ತು ಸರ್ವ ಸಮತೋಭಾವವಿದ್ದಿತು.

ಯಾವುದೇ ಕೆಲಸ ಮಾಡಬೇಕೆಂದು ನಿಶ್ಚಯಿಸಿದರೆ ಅದು ಆಗುವವರೆಗೆ ಅದನ್ನು ಬಿಡದೆ ಬೆನ್ನತ್ತುತ್ತಿದ್ದರು. ಆಫೀಸಿಗೆ ಹೋಗಿ ಅಧಿಕಾರಿಗಳನ್ನು ಕಂಡು ವಿಚಾರವಿನಿ ಮಯ ಮಾಡುತ್ತಿದ್ದರು. ಅವರನ್ನು ಒಪ್ಪಿಸಿದ ನಂತರ ಸಂಬಂಧಪಟ್ಟ ಗುಮಾಸ್ತರನ್ನು (Case worker) ಅವರಿದ್ದಲ್ಲಿಗೆ ಹೋಗಿ ವಿಚಾರಿಸುತ್ತಿದ್ದರು. ಎಷ್ಟೋ ವೇಳೆ ಅಧಿಕಾರಿಗಳ ಮನೆಗಳಿಗೇ ಹೋಗಿ ಕಾಣುತ್ತಿದ್ದರು. ಹತ್ತಾರು ಸಾರಿ ಬಿಡದೆ ಫೋನ್ ಮಾಡುತ್ತಿದ್ದರು. ಅಧಿಕಾರದಿಂದ ಅವರಿಗೆ ಜೋರಾಗಿ ಹೇಳದೆ ಒಪ್ಪಿಸು ತ್ತಿದ್ದರು. ಅಂತಹ ಸೌಮ್ಯಗುಣ ಅವರಲ್ಲಿತ್ತು.

ಯಾರಾದರೂ ತಪ್ಪು ಮಾಡಿದರೆ ಅಥವಾ ಅವರಿಗೆ ಬೇಸರ ಬರುವಂತೆ ವರ್ತಿಸಿದರೆ ಆಗಿಂದಾಗಲೇ ಅದನ್ನು ತಿದ್ದಿ ಸರಿಪಡಿಸಿ ಆಗಲೇ ಮರೆತು ಬಿಡುತ್ತಿದ್ದರು. ಇಂತ ಕ್ಷಮಾಗುಣ ಅವರಲ್ಲಿತ್ತು. ಯಾವಾಗಲೂ ಹಸನ್ಮುಖಿ ಯಾಗಿರುತ್ತಿದ್ದರು.

ಅವರ ಅರವತ್ತನೇ ಷಷ್ಠ್ಯಬ್ಧಿಯನ್ನು ದಾವಣಗೆರೆ ಜಿಲ್ಲಾ ಸಂಸ್ಥೆಯವರು ಆಚರಿಸಿ ಅವರಿಗೆ ನೆನಪಿನ ಕಾಣಿಕೆ ಯಾಗಿ 51 ಸಾವಿರ ರೂಪಾಯಿ ನಿಧಿ ಅರ್ಪಿಸಿದಾಗ ಆ ಹಣವನ್ನೆಲ್ಲಾ ಆಗಲೇ ಕೊಂಡಜ್ಜಿಯಲ್ಲಿ ಸ್ಥಾಪನೆಯಾಗ ಲಿರುವ ಜಲದರ್ಶಿನಿ ವಿದ್ಯಾಪೀಠಕ್ಕೆಂದು ದಾನ ನೀಡಿದರು. ಕರ್ನಾಟಕ ರಾಜ್ಯ ಸಂಸ್ಥೆಯವರು ಬೆಂಗಳೂರಿನಲ್ಲಿ ಒಂದು ಲಕ್ಷ ರೂಪಾಯಿ ನಿಧಿಯನ್ನು ಅರ್ಪಿಸಿದ್ದನ್ನು ಆಗಲೇ ಸ್ಕೌಟ್ಸ್ ಸಂಸ್ಥೆಯ ಚಟುವಟಿಕೆಗೆ ಉಪಯೋಗಿಸಿರಿ ಎಂದು ದಾನ ಮಾಡಿದರು. ಆರ್ಥಿಕ ಮುಗ್ಗಟ್ಟಿದ್ದರೂ ಈ ಹಣಕ್ಕೆ ಆಸೆ ಪಡಲಿಲ್ಲ. ಅಂತಹ ಮಹಾನ್‌ತ್ಯಾಗಿ ಮತ್ತು ನಿಸ್ಪೃಹ ವ್ಯಕ್ತಿ ಮತ್ತು ನಿಷ್ಕಾಮಕರ್ಮಿ.

ನಮ್ಮ ಗ್ರಾಮದಲ್ಲಿ ಒಂದು ಸಭೆ ಏರ್ಪಾಟು ಮಾಡಿ ಅಧ್ಯಕ್ಷತೆ ವಹಿಸಲು ಕೇಳಿ ಆಹ್ವಾನ ಪತ್ರವನ್ನು ಕಳಿಸಿ ದ್ದೆನು. ಸಭೆ ನಡೆಯುವ ಒಂದು ಗಂಟೆ ಮುಂಚೆ ಆಗಮಿಸಿದರು. ಬರುವಾಗ ನಾನು ಕರೆದಿದ್ದ ಅತಿಥಿ ಯನ್ನು ತಾವು ಜೀಪಿನಲ್ಲಿ ಕರೆದುಕೊಂಡು ಬಂದು ನಿಮ್ಮ ಅತಿಥಿಯನ್ನು ಕರೆದುಕೊಂಡು ಬಂದಿರುವೆನೆಂದು ತಿಳಿಸಿ ದರು. ಆಹ್ವಾನ ಪತ್ರಿಕೆಯಲ್ಲಿ ಅತಿಥಿಯನ್ನು ತಿಳಿದು ಕೊಂಡು ಇವರೇ ಅವರಲ್ಲಿಗೆ ಹೋಗಿ ಕರೆದುಕೊಂಡು ಬಂದಿದ್ದರು. ಇಂತಹ ಶಿಸ್ತು, ಪರೋಪಕಾರ, ಸಮಯ

ಪ್ರಜ್ಞೆ ಗುಣಗಳಿದ್ದವು. ಸಭೆ, ಸಮಾರಂಭ ಮುಂತಾದ ಕಾರ್ಯಕ್ರಮಗಳು ನಿಯಮಿತ ವೇಳೆಯಲ್ಲಿ ನಡೆಯುವಂತೆ ನೋಡಿಕೊಳ್ಳುತ್ತಿದ್ದರು.

ಕೊಂಡಜ್ಜಿ ಗ್ರಾಮವು ಕುಗ್ರಾಮವಾಗಿತ್ತು. ಇವರ ಪರಿಶ್ರಮದಿಂದ ಈಗ ಎಲ್ಲಾ ಸವಲತ್ತುಗಳನ್ನು ಪಡೆದ ಮಾದರಿ ಗ್ರಾಮವಾಗುತ್ತಿದೆ. ಹುಟ್ಟೂರಿನ ಸೇವೆ ಮಾಡಿ ಋಣ ತೀರಿಸಿದ್ದಾರೆ. ಆ ಗ್ರಾಮದವರು ಇವರಿಗೆ ಚಿರ ಋಣಿಗಳೆಂದರೆ ತಪ್ಪಾಗದು. ಈ ಗ್ರಾಮದ ಅಭಿವೃದ್ಧಿಗೆ ನಿಸ್ವಾರ್ಥ ಸಮಾಜ ಸೇವಕರಾಗಿ ದುಡಿದರು.

ಕೊಂಡಜ್ಜಿ ಬಸಪ್ಪನವರು ಸತ್ಯಸಂಧ, ಸಭ್ಯಗೃಹಸ್ಥ, ಸಹಕಾರಿ, ನಿಗರ್ವಿ, ಸಂಘಜೀವಿ, ಆತ್ಮವಿಶ್ವಾಸವುಳ್ಳವ, ನಿಷ್ಕಲ್ಮಷಹೃದಯಿ, ಸೌಜನ್ಯ ಮೂರ್ತಿ, ಮಕ್ಕಳ ಪ್ರೇಮಿ, ಉದಾತ್ತಗುಣಗಳ ಸಾಕಾರ ಮೂರ್ತಿ, ಸ್ನೇಹ ಪರ, ಅಜಾತ ಶತ್ರು, ಮಾನವಪ್ರೇಮಿ, ದಯಾಳು, ಪ್ರಕೃತಿಪ್ರೇಮಿ, ದೈವಭಕ್ತ ಮುಂತಾದ ಸದ್ಗುಣಗಳಿಂದ ಪರಿಶುದ್ಧ ಜೀವನ ನಡೆಸಿದ "ದೇವಮಾನವ" ಎಂದರೆ ಉತ್ಪ್ರೇಕ್ಷೆಯಾಗಲಾರದು.

ಇವರಲ್ಲಿದ್ದ ಪ್ರತಿಯೊಂದು ಸದ್ಗುಣಗಳಿಗೂ ಅವರ ಜೀವನದಲ್ಲಿ ನಡೆದ ಸಂದರ್ಭಗಳನ್ನು ಉದಾಹರಣೆ ಕೊಡ ಬಹುದು.

ಇವರ ಹಿತೈಷಿಗಳೆನ್ನುವವರಲ್ಲಿ ಯಾರಾದರೂ ಏನಾದರೂ ಹೇಳಿದರೆ ಅದನ್ನು ಪರಿಶೀಲಿಸದೆ ತಕ್ಷಣವೇ ಒಪ್ಪಿ ಬಿಡುತ್ತಿದ್ದರು. ಇದನ್ನು ಕೆಲವರು ದುರುಪಯೋಗ ಮಾಡಿಕೊಂಡದ್ದೂ ಉಂಟು–"ಮೈ ಎಲ್ಲಾ ಚಿನ್ನ ಕಿವಿ ಮಾತ್ರ ಹಿತ್ತಾಳೆ" ಎನ್ನುವಂತೆ ಒಂದು ನ್ಯೂನತೆ ಇತ್ತೆಂದರೆ ತಪ್ಪಾಗಲಾರದು. ಆದರೆ ಸರಿಯಾದ ವಿಷಯ ತಿಳಿದ ಮೇಲೆ ಅದನ್ನು ಮನಸ್ಸಿನಲ್ಲಿಡುತ್ತಿರಲಿಲ್ಲ. ರಾಜಕೀಯದಲ್ಲಿ ಕೆಲವು ಸಾರಿ ತಮ್ಮವರೆಂಬುವವರಿಂದಲೇ ಭಾರಿ ಕಷ್ಟ ನಷ್ಟಗಳನ್ನು ಅನುಭವಿಸಿದರು. ಆದರೆ ಅದನ್ನು ಮರೆತು ಅವರೊಂದಿಗೆ ವಿಶ್ವಾಸದಿಂದಲೇ ಇರುತ್ತಿದ್ದರು.

ಇವರ ಸಾಂಸಾರಿಕ, ಸಾಮಾಜಿಕ, ಮತ್ತು ರಾಜಕೀಯ ಜೀವನವು ದೈವಾನುಗ್ರಹದಿಂದ ಸುಗಮವಾಗಿ ಸಾಗಿತು. ಇವರ ಸೇವಾತತ್ಪರತೆಯನ್ನು ಮನಗಂಡು ಕರ್ನಾಟಕ ಸರ್ಕಾರವು ಇವರಿಗೆ "ಸಮಾಜ ಸೇವಾ ಪುರಸ್ಕಾರ" ನೀಡಿತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರಸಂಸ್ಥೆಯು ಅತ್ಯುನ್ನತ ರಾಷ್ಟ್ರಮಟ್ಟದ ಗೌರವ "ಬೆಳ್ಳಿಯ ಆನೆ" ಯನ್ನು ನೀಡಿ ಸನ್ಮಾನಿಸಿತು.

ಅವರ "ಜಲದರ್ಶಿನಿ ವಿದ್ಯಾಪೀಠ"ದ ಕನಸು ದಾವಣಗೆರೆ ಬಾಪೂಜೀ ವಿದ್ಯಾಸಂಸ್ಥೆಯ ಸಹಾಯದಿಂದ ನನಸಾಗಲಿ. ಅವರ ಹಿರಿಯ ಮಗ ಶ್ರೀ ಕೆ. ಬಿ. ಷಣ್ಮುಖಪ್ಪನವರು ಅವರ ಧ್ಯೇಯ, ಧೋರಣೆಯನ್ನು ಹೊಂದಿದವರಾಗಿ ಸಂಸ್ಥೆಯ ಮತ್ತು ಸಮಾಜ ಸೇವೆಯಲ್ಲಿ ನಿರತರಾಗಿರುವರು. ಅವರು ಯಶಸ್ಸು ಗಳಿಸಲೆಂದು ಹಾರೈಸುವ. ಈಗ ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಅವರ ಮಾರ್ಗದರ್ಶನದಲ್ಲಿ ಮುಂದುವರಿಯುತ್ತಿರುವುದು ಸಂತೋಷದ ಸಂಗತಿ.

ದೇವಮಾನವರಾದ ಕೊಂಡಜ್ಜಿ ಬಸಪ್ಪನವರ ಆದರ್ಶ ಜೀವನವು ನಮಗೆ ದಾರಿದೀಪವಾಗಲಿ.

ಅವರು ಕೊನೆಗಾಲದ ಅನೇಕ ದಿನಗಳನ್ನು ಅನಾರೋಗ್ಯದಿಂದ ಬೆಂಗಳೂರಿನ ವಿಕ್ಟೋರಿಯ ಆಸ್ಪತ್ರೆಯಲ್ಲಿ ಕಳೆದರು. ಇನ್ನೂ ಉತ್ತಮ ವ್ಯವಸ್ಥೆಯಿರುವ ಮದ್ರಾಸ್, ಬೊಂಬಾಯಿ ಅಥವಾ ಇನ್ನಾವುದೋ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಿದ್ದರೆ ಗುಣ ಹೊಂದಿ ಇನ್ನೂ ಕೆಲವು ಕಾಲ ನಮ್ಮೊಂದಿಗೆ ಇರುತ್ತಿದ್ದರೋ ಏನೋ ?



1972 ರಲ್ಲಿ ಕೇಂದ್ರ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಉಪಮಂತ್ರಿಯಾಗಿ ರಾಷ್ಟ್ರಪತಿ ಶ್ರೀ ವಿ. ವಿ. ಗಿರಿಯವರ ಸಮ್ಮುಖದಲ್ಲಿ ಪ್ರಮಾಣವಚನ ಸ್ವೀಕಾರ. ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧಿ ಅವರನ್ನೂ ಚಿತ್ರದಲ್ಲಿ ಕಾಣಬಹುದು.



1976 ರಲ್ಲಿ ನಡೆದ ಕಬ್ ವಜ್ರಮಹೋತ್ಸವ ಸಂದರ್ಭದಲ್ಲಿ ಶ್ರೀ ಎನ್. ಲಕ್ಷ್ಮಣರಾವ್ ಮತ್ತು ಡಾ॥ ಎಸ್. ಬಿ. ಕೌಶಿಕ್ ಅವರೊಡನೆ ಶ್ರೀ ಕೊಂಡಜ್ಜಿ.



1976 ರಲ್ಲಿ ಬೆಂಗಳೂರು ದಕ್ಷಿಣ ಜಿಲ್ಲಾ ಸ್ಕೌಟ್ ಸಮಾರಂಭವೊಂದರಲ್ಲಿ ಮೇಜರ್ ಎಂ. ಆರ್. ನಾರಾಯಣಸಿಂಗ್, ಶ್ರೀ ಟಿ. ಎಸ್. ನಾರಾಯಣರಾವ್ ಮತ್ತು ಶ್ರೀ ಜಿ. ಶಿವಪ್ಪ ಅವರೊಂದಿಗೆ ಶ್ರೀ ಕೊಂಡಜ್ಜಿ.

ಸ್ಕೌಟ್ ಸಂಸ್ಥೆಯ ರಾಜ್ಯ ಕಾರ್ಯಾಲಯದ ಮುಂದೆ ವಿದೇಶಿ ಅತಿಥಿಯೊಂದಿಗೆ ಶ್ರೀ ಎ. ಡಿ. ಆನಂದನ್ ಮತ್ತು ಈಗಿನ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ವಿ. ಪಿ. ದೀನದಯಾಳು ನಾಯ್ಡು ಅವರೊಂದಿಗೆ ಶ್ರೀ ಕೊಂಡಜ್ಜಿ.





ಧರ್ಮಪತ್ನಿ ಶ್ರೀಮತಿ ಸರ್ವಮಂಗಳಮ್ಮ ಮತ್ತು ಶ್ರೀ ಕೊಂಡಜ್ಜಿ ಬಸಪ್ಪ.



ಚಿತ್ರದುರ್ಗ ಜಿಲ್ಲಾ ಸಂಸ್ಥೆಯ ಆರಂಭೋತ್ಸವ ಸಂದರ್ಭದಲ್ಲಿ
ಶ್ರೀ ಎಸ್. ನಿಜಲಿಂಗಪ್ಪನವರು ಮತ್ತು ಶ್ರೀ ಎಸ್. ಎಂ. ಯಾಹ್ಯಾ
ಅವರೊಂದಿಗೆ ಶ್ರೀ ಕೊಂಡಜ್ಜಿ.



ಕೊಂಡಜ್ಜಿ ಶಿಬಿರಾವರಣದಲ್ಲಿ ನಿರ್ಮಾಣವಾಗಿರುವ ಧರ್ಮರತ್ನಾಕರ ಶ್ರೀ ರಾಜನಹಳ್ಳಿ
ಮದ್ದೂರಾಯಪ್ಪ ಸ್ಕೌಟ್ ಮತ್ತು ಗೈಡ್ ಭವನದ ಮುಂಭಾಗದಲ್ಲಿ ಶ್ರೀ ಕೊಂಡಜ್ಜಿ.

# ನಾಕಂಡ 'ಕೊಂಡಜ್ಜಿ'

**ಮು. ವೆಂಕಟಕೃಷ್ಣಪ್ಪ**

ನನಗೆ ಕೊಂಡಜ್ಜಿಯವರ ಮೊದಲ ಪರಿಚಯವಾದುದು ನಲವತ್ತರ ದಶಕದಲ್ಲಿ. ಅವರು ದೊಡ್ಡಬಳ್ಳಾಪುರದ (ಈಗ 'ಬೆಸೆಂಟ್ ಪಾರ್ಕ್' ಎಂಬ ಹೆಸರು ಪಡೆದಿರುವ) ಕೇಂದ್ರ ಸ್ಕೌಟ್ ಶಿಬಿರ ಕ್ಷೇತ್ರಕ್ಕೆ ಸಹಾಯಕ ಸ್ಕೌಟ್ ಕಮೀಷನರ್ ಆಗಿ ತರಬೇತಿ ಪಡೆಯಲು ಬಂದಾಗ ಆಯಿತು. ಮೊದಲ ಭೇಟಿಯಲ್ಲೇ ನಾವು ಪರಸ್ಪರ ಆತ್ಮೀಯರಾದೆವು. ಆ ಶಿಬಿರದ ಶಿಕ್ಷಕರಲ್ಲಿ ಸಹಾಯಕ ನಾಗಿದ್ದ ನನಗೆ ಅವರು ತಮ್ಮ ಸರಳ ಮುಗ್ಧ ರೀತಿಯಲ್ಲಿ "ಕಾಶ್ಮೀರಕ್ಕೆ ಒಂದು ಸ್ಕೌಟ್ ಪ್ರವಾಸ ಏರ್ಪಡಿಸಿರಿ, ನಾವೆಲ್ಲ ಒಮ್ಮೆ ಅಲ್ಲಿಗೆ ಹೋಗಿ ಬರೋಣ" ಎಂದರು. ಆಗ ಕಾಶ್ಮೀರ ಪ್ರವಾಸವೇ ಅವರಿಗೆ ಅತಿ ಸಾಧ್ಯವೆನಿಸಿತ್ತು. ಆ ಕೂಡಲೇ ಅಲ್ಲಿಗೆ ಹೋಗಿ ಬರಲು ಆಗದೆ ಇದ್ದಾಗ್ಯೂ ಕೆಲವು ತಿಂಗಳ ನಂತರ ಕೊಂಡಜ್ಜಿಯವರು ಕಾಶ್ಮೀರಕ್ಕೂ ಹೋಗಿಬಂದರು. ಕೆನ್ಯಾ (ದಕ್ಷಿಣ ಆಫ್ರಿಕ) ಕ್ಕೂ ಹೋಗಿ ಬಂದರು, ಜೇಡನ್‌ಪೋವೆಲ್ಲರ ಸಮಾಧಿಗೆ ಸಾಕ್ಷಾತ್ತಾಗಿ ಗೌರವ ಸಲ್ಲಿಸಿ ಬಂದ ಸೌಭಾಗ್ಯವನ್ನೂ ಸಂಪಾದಿಸಿದರಲ್ಲದೆ, ಫಿಲಿಫೈನ್ಸ್, ಥಾಯ್ಲೆಂಡ್, ಹಾಂಕಾಂಗ್ ಮುಂತಾದ ಹಲವಾರು ದೇಶಗಳಲ್ಲಿ ಸಂಚರಿಸಿ ಇವೆಲ್ಲದರಿಂದ ತಾವುಗಳಿಸಿದ ಅನುಭವವನ್ನು ಸ್ಕೌಟ್ ಬಾಲಕರ ಅಭ್ಯುದಯಕ್ಕೆ ವಿನಿಯೋಗಿಸಿದರು.

ಕೊಂಡಜ್ಜಿಯವರು ತಮಗೆ ಪ್ರಿಯವಾದ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಅಭಿವೃದ್ಧಿಗಾಗಿ ಸದಾ ಚಿಂತನೆ ಮಾಡುತ್ತಿದ್ದರು. ಕನ್ನಡನಾಡು ತುಂಬಾ ವಿಸ್ತಾರವಾಗಿದ್ದು ವಿವಿಧ ಸಂಸ್ಕೃತಿ ಸಂಪ್ರದಾಯಗಳ ಬೀಡು. ನಮ್ಮ ರಾಜ್ಯದ ವಿವಿಧ ಭಾಗಗಳಲ್ಲಿನ ಮಕ್ಕಳೂ ನಮ್ಮ ರಾಜ್ಯದ ಎಲ್ಲೆಡೆಯನ್ನು ಪ್ರತ್ಯಕ್ಷ ಕಂಡು, ಅನುಭವಿಸಿ, ಆನಂದಿಸಿ, ಅಭ್ಯುದಯ ಪಡೆಯ ಬೇಕು ಎಂಬುದು ಅವರ ಹಂಬಲವಾಗಿತ್ತು. ಅದಕ್ಕಾಗಿ ಬಳ್ಳಾರಿ, (ಸೊಂಡೂರು), ರಾಯಚೂರು, ಮಂಗಳೂರು, ಮೈಸೂರು, ಕುಮಟ, ದೊಡ್ಡಬಳ್ಳಾಪುರ, ಹುಬ್ಬಳ್ಳಿ–ಧಾರವಾಡ, ಮುಂತಾದ ಕಡೆ ಸ್ಕೌಟ್–ಗೈಡ್ಸ್ ಜಾಂಬೋರಿಟ್‌ಗಳನ್ನೂ ಕಬ್ಸ್–ಬುಲ್‌ಬುಲ್‌ಗಳ ಉತ್ಸವಗಳನ್ನು ಏರ್ಪಡಿಸಿ, ಅದ್ದೂರಿಯಾಗಿ ನಡೆಸಿ ಕರಾವಳಿಯ ಮಕ್ಕಳು ಬಯಲು ಸೀಮೆಯ ಸೊಬಗನ್ನು, ಒಳನಾಡಿನ ಮಕ್ಕಳು ಸಮುದ್ರದ ಸೌಂದರ್ಯವನ್ನು, ದಕ್ಷಿಣ ಭಾಗದ ಮಕ್ಕಳು ಕರ್ನಾಟಕ ಉತ್ತರ ಭಾಗದ ಕೋಟೆ ಕೊತ್ತಲಗಳೊಂದಿಗೆ ಅಲ್ಲಿನ ಜನತೆಯ ಔದಾರ್ಯವನ್ನು, ಅತ್ತ ಕಡೆಯ ಮಕ್ಕಳು ಬೆಂಗಳೂರು ಮೈಸೂರು ಕಡೆಯ ಅರಮನೆಗಳ ವೈಭವ, ಬೃಂದಾವನ ಚಂದ, ಮಹಾ ನಗರಗಳ ದೇವಾಲಯ ಗುಡಿಗೋಪುರ ವಿಜ್ಞಾನ ಉದ್ಯಾನ ಮಂದಿರಗಳ ಅಂದವನ್ನೂ ಸವಿಯುವಂತೆ ಮಾಡಿ ಸಂತೃಪ್ತರಾದರು ಈ ಪುಣ್ಯಜೀವಿ.

ಅಂತರರಾಷ್ಟ್ರೀಯ, ಪ್ರಾದೇಶಿಕ, ರಾಷ್ಟ್ರೀಯಮಹಾ ಕೂಟಗಳ ಸಂದರ್ಭದಲ್ಲೆಲ್ಲಾ ದಕ್ಷರಾದವರನ್ನು ಹುಡುಕಿ, ಅವಶ್ಯಕ ಸಹಾಯವನ್ನು ದೊರಕಿಸಿ, ನ್ಯೂಜಿಲೆಂಡ್, ಅಮೆರಿಕ, ಯೂರೋಪ್, ಜಪಾನ್ ಮುಂತಾದ ಕಡೆ ಗಳಿಗೆ ಸ್ತ್ರೀಪುರುಷರ ಭೇದವಿಲ್ಲದೆ ಕಳುಹಿಸಿಕೊಡುವ ಔದಾರ್ಯವನ್ನು ಮೆರೆದವರು ನಮ್ಮ ಕೊಂಡಜ್ಜಿ. ಈ ರೀತಿಯಾಗಿ ಹೋಗಿ ಬಂದವರು ಅಲ್ಲಲ್ಲಿ ತಾವು ಗಳಿಸಿದ ಅನುಭವವನ್ನು ರಾಜ್ಯಕ್ಕೆ ಹಿಂದಿರುಗಿದ ಬಳಿಕ ಧಾರಾಳವಾಗಿ ತಮ್ಮೊಂದಿಗಿನ ಕಿರಿಯರಿಗೂ ಹೊರಗಿನ ನವರಿಗೂ ಹಂಚಿ ಕರ್ನಾಟಕದ ಸ್ಕೌಟ್-ಗೈಡ್‌ಗಳ ದಕ್ಷತೆ ಸಾಮರ್ಥ್ಯ ಸೇವೆಗಳು ಅತ್ಯುನ್ನತ ಮಟ್ಟದಲ್ಲಿರುವಂತೆ

ರಕ್ಷಿಸಿಕೊಂಡು ಬಂದಿರುವುದು ತುಂಬ ಸಮಾಧಾನಕರ ವಾಗಿದೆ.

ಅಧಿಕಾರದಲ್ಲಿದ್ದಾಗಲು ಅಷ್ಟೆ, ಅಧಿಕಾರದಿಂದ ಹೊರ ಬಂದ ಮೇಲೂ ಅಷ್ಟೆ, ಒಂದೇ ತೆರನಾಗಿ, ಯಾವುದೇ ಕಛೇರಿಯ ಯಾವುದೇ ವಿಭಾಗದ ಯಾರ ಬಳಿಗೇ ಆಗಲಿ ಕೊಂಡಜ್ಜಿಯವರು ನೇರವಾಗಿ ಸಾಫ್‌ಸೀದಾ ಹೋಗಿ, ಆಗಿಂದಾಗಲೇ ತಾವು ಬಂದಿದ್ದ ಕೆಲಸವನ್ನು ಸಾಧಿಸಿ ಕೊಂಡೇ ಬರುತ್ತಿದ್ದರು.

ಇವರ ಈ ಸಾಧನೆಗಳ ಹಿಂದೆ ಇವರಿಗೆ ಬೆಂಬಲವಾಗಿ ನಿಷ್ಕಾಮಂತರ ಒಂದು ಪಡೆಯೇ ಇದ್ದಿತು. ಅಂಥವ ರಲ್ಲಿ ಕೆಲವರ ಹೆಸರು ಹೇಳಬಹುದಾದರೆ ರಾಜ್ಯ ಕಾರ್ಯದರ್ಶಿಯಾಗಿದ್ದ ಶ್ರೀ ಎ. ಡಿ. ಆನಂದನ್, ಹೆ॥ಕ್ವಾ॥ ಕಮೀಷನರ್ ಆಗಿದ್ದ ಡಾ॥ ಎಸ್. ಬಿ ಕೌಶಿಕ್ ರಾಜ್ಯ ಸ್ಕೌಟ್ ಕ॥ ಶ್ರೀ ವಿ. ಪಿ. ದೀನದಯಾಳು ನಾಯ್ಡು, ರಾಜ್ಯ ಸಂಘಟನಾ ಕ॥ ಶ್ರೀ ಟಿ ವಿ. ನೀಲ ಕಂಠಂ, ರಾಜ್ಯ ಖಜಾಂಚಿಗಳಾಗಿದ್ದ ಕೊಂಡಜ್ಜಿಯವರ ಪುತ್ರರೇ ಆದ ಶ್ರೀ ಕೆ. ಬಿ.ಷಣ್ಮುಖಪ್ಪ, ಬೇಸಂಟ್ ಪಾರ್ಕ್‌ನ ಮುಖ್ಯಾಧಿಕಾರಿಯಾಗಿದ್ದ ಶ್ರೀ ಕೆ. ಬಿ. ನಂಜಪ್ಪ, ಪ್ರಕೃತ ರಾಜ್ಯ ಸ್ಕೌಟ್ ಸಂಘಟನಾ ಕ॥ ಶ್ರೀ ಎಸ್. ಆದಿಕೇಶವಲು, ಜನಪದ ಸಾಹಿತ್ಯಮಣಿ ಶ್ರೀ ಗೊ. ರು. ಚನ್ನಬಸಪ್ಪ ಮುಂತಾದವರು. ಇಂತಹವರು ಇನ್ನೂ ಅನೇಕರು ಒತ್ತಾಸೆಯಾಗಿದ್ದು ನಿಷ್ಠೆಯಿಂದ ಏಕೀಭವಿಸಿ ದುಡಿದುದರಿಂದಲೇ ಕರ್ನಾಟಕದ ಸಂಸ್ಥೆ ಎಂದರೆ ಸ್ಕೌಟಿಂಗ್–ಗೈಡಿಂಗ್ ಪ್ರಪಂಚದಲ್ಲಿ ಅತ್ಯುತ್ತಮ ಹೆಸರು ಗೌರವ ಗಳಿಸಲು ಸಾಧ್ಯವಾಯಿತು.

ಕೊಂಡಜ್ಜಿಯವರಲ್ಲಿ ಎದ್ದು ಕಾಣುತ್ತಿದ್ದ ಇನ್ನೊಂದು ಸ್ವಭಾವವೆಂದರೆ ಅತಿಥಿ ಸತ್ಕಾರ. ಮನೆಗೇ ಆಗಲಿ, ಕಛೇರಿಗೇ ಆಗಲಿ, ಸ್ಕೌಟ್ ಗೈಡ್ ರ‍್ಯಾಲಿ, ಜಾಂಬೋರಿಗಳಲ್ಲಾಗಲಿ ಸ್ವ-ರಾಜ್ಯ ನೆರೆ ರಾಜ್ಯ ರಾಷ್ಟ್ರಮಟ್ಟದಲ್ಲಾಗಲಿ ಪ್ರತಿಕಡೆಯೂ ಕಿರಿಯ ಹಿರಿಯ, ಬಡವಬಲ್ಲಿದ, ಜವಾನ ಪ್ರಧಾನಿ, ಯಾವೊಂದು ತಾರತಮ್ಯವಿಲ್ಲದೆ ಅವರ ಯೋಗಕ್ಷೇಮದ ಪ್ರತಿ ಅಂಶ ವನ್ನೂ ಸೂಕ್ಷ್ಮವಾಗಿ ಗಮನಿಸಿ, ಪ್ರತಿಯೊಂದನ್ನೂ ಪೂರೈಸಿ, ತಮ್ಮ ದೇಹದ ದಣಿವನ್ನ ಮಾನಸಿಕ ಒತ್ತಡವನ್ನ ಒತ್ತಟ್ಟಿಗಿಟ್ಟು ಇತರರ ಸಂತೋಷ ಸಂತೃಪ್ತಿಗಳನ್ನು ನೋಡಿ ತಾವು ಸಮಾಧಾನ ಪಡುತ್ತಿದ್ದರು. ನಿರ್ವಾಹವಿಲ್ಲದೆ ಗಣ್ಯಅತಿಥಿಗಳ ಗೌರವ ರಕ್ಷಣೆಗಾಗಿ ಮಾತ್ರ ಅವರೊಡನೆ ಭೋಜನಕ್ಕೆ ಕೂರುವ ತೋರಿಕೆ ಮಾಡುತ್ತಿದ್ದರಲ್ಲದೆ, ನೆರೆದಿದ್ದ ಸಮಸ್ತರ ಊಟೋಪಚಾರ ಮುಗಿದ ತರುವಾಯವೇ ಅಡುಗೆಯವರ, ಪರಿಚಾರಕರ ಜೊತೆ ತಾವೂ ಕುಳಿತು, ಕಲೆತು ಉಣ್ಣುತ್ತಿದ್ದರೇ ಹೊರತು ಅಗ್ರಪಂಕ್ತಿಯನ್ನು ಎಂದೂ ಅಪೇಕ್ಷಿಸಿದವರಲ್ಲ. ಕಿರಿಯರಲ್ಲಿ ಕಿರಿಯ ನಾನು ಎನ್ನುವ ಮನೋಭಾವ ಅವರದಾಗಿತ್ತು.

ಸ್ಕೌಟ್ ಗೈಡ್ಸ್ ಸಾಹಿತ್ಯವು ಕನ್ನಡದಲ್ಲಿ ವಿಪುಲ ವಾಗುವಂತೆ ನೀಡಿದ ಪ್ರೋತ್ಸಾಹವೂ ಅಪಾರ. ಇದ ಕ್ಕೆಂದೇ ವಿಶೇಷ ಸಮಿತಿಗಳನ್ನು ರಚಿಸಿ, ಸಮರ್ಥರನ್ನು ಗುರುತಿಸಿ, ಅವರಿಂದ ಸೂಕ್ತವಾಗಿ ಬರೆಯಿಸಿ, ಸಂಸ್ಥೆ ಯಿಂದ ಪ್ರಕಟಿಸಿ ಕನ್ನಡ ಸಾಹಿತ್ಯಕ್ಕೆ ಸ್ಕೌಟಿನಲ್ಲಿದ್ದ ಕೊರತೆಯನ್ನು ಸಾಧ್ಯವಾದಷ್ಟೂ ತಗ್ಗಿಸಿದರು. ಈ ಸೇವೆ ಯಲ್ಲಿ ಹಿಂದೆ ರಾಜ್ಯ ಗೈಡ್ ಕಮೀಷನರಾಗಿದ್ದ ಶ್ರೀಮತಿ ಎಂ. ಆರ್. ಲಕ್ಷ್ಮಮ್ಮನವರು ಪ್ರಕಟನಾ ವಿಭಾಗದ ಆಯುಕ್ತರಾಗಿದ್ದ ಶ್ರೀ ಕೆ. ಬಿ. ಷಣ್ಮುಖಪ್ಪನವರು ಇವರ ಭುಜಗಳಾಗಿದ್ದರು.

ಇವರ ಸುದೀರ್ಘವೂ ಅಪಾರವೂ ಆದ ಸೇವೆಯನ್ನು ಪರಿಗಣಿಸಿ ರಾಷ್ಟ್ರೀಯ ಕೇಂದ್ರದವರು 1968ರಲ್ಲಿ ಇವರಿಗೆ "ಬೆಳ್ಳಿಯ ಆನೆ" (ಸಿಲ್ವರ್ ಎಲಿಫೆಂಟ್) ಪ್ರಶಸ್ತಿ ನೀಡಿ ಗೌರವಿಸಿರುವುದು ಏನೇನೂ ಹೆಚ್ಚಲ್ಲ. ಏಕೆಂದರೆ ಇದಕ್ಕೂ ಇಪ್ಪತ್ತು ವರ್ಷಗಳ ಹಿಂದೆಯೇ ಇವರ ಸಾರ್ವ ಜನಿಕ ಸೇವೆಯನ್ನು ಮೆಚ್ಚಿ ಮೈಸೂರಿನ ಶ್ರೀಮನ್ಮಹಾ ರಾಜರವರು ಬಂಗಾರದ ಪದಕವನ್ನಿತ್ತು ಸನ್ಮಾನಿಸಿದ್ದರು.

ಕೊಂಡಜ್ಜಿಯವರಿಗೆ ಮೊದಲು ರಾಜ್ಯದ ಪ್ರಧಾನ ಕಮೀಷನರಾಗಿದ್ದ ಶ್ರೀ ಪಿ. ಶಿವಶಂಕರ್ ಅವರು ಒಂದು ಸಮಾರಂಭದಲ್ಲಿ ನಾನಾ ಕೊಡುಗೆಗಳನ್ನು ನೀಡುತ್ತ ಅಖಿಲ ಕರ್ನಾಟಕ ಮಕ್ಕಳ ಕೂಟಕ್ಕೂ ರಾಜ್ಯದ ಸ್ಕೌಟ್ಸ್–ಗೈಡ್ಸ್ ಸಂಸ್ಥೆಗೂ ಐದೈದು ಸಾವಿರ ರೂಪಾಯಿ ಗಳನ್ನು ನೀಡಿದ್ದುದನ್ನು ಮನಸಿನಲ್ಲಿರಿಸಿಕೊಂಡಿದ್ದ ಕೊಂಡಜ್ಜಿಯವರು ಇದನ್ನು ಹೇಗೆ ಸಾರ್ಥಕಗೊಳಿಸ ಬಹುದೆಂದು ಯೋಚಿಸುತ್ತಿದ್ದರು. ಆ ವೇಳೆ ಆಗತಾನೇ

